# ಮೊದಲ ಮಾತು

ಇದು ನನ್ನ ಮೊದಲ ಕವನಸಂಗ್ರಹ. ೧೯೪೩ ರಲ್ಲಿ ನಾನು ಬರೆಯಲಾರಂಭಿಸಿದಂದಿನಿಂದ ೧೯೪೪ ರ ಕೊನೆಯವರೆಗೆ ಬರೆದ ಕವನಗಳಲ್ಲಿ ಹೆಚ್ಚಿನವು ಇಲ್ಲಿವೆ. ಮೂರು ನಾಲ್ಕು ದೊಡ್ಡ ಕವಿತೆಗಳನ್ನು ಬಿಟ್ಟು ಉಳಿದುವೆಲ್ಲಾ ಭಾವಗೀತಗಳು. ಯಾವುದೋ ಒಂದು ಭಾವಲಹರಿಯಲ್ಲಿ ತೇಲಿಬಿಟ್ಟ ಮಾತಿನ ಹಾಯಿ ದೋಣಿಗಳು. ಕೆಲವು ಗೀತಗಳಲ್ಲಿ ಭಾವಕ್ಕೆ ಅನುವಾಗಿ ಹೊಸಗತಿ, ಹೊಸಛಂದಗಳನ್ನು ಬಳಸಿಕೊಂಡಿದೇನೆ. ಇವುಗಳಲ್ಲಿ ಹೆಚ್ಚಿನವು ಹಾಡಲೆಂದು ಬರೆದುವು. ಹಾಡಿಕೊಂಡರೆ ಅವುಗಳ ರಸಾನುಭವ ಹೆಚ್ಚಾಗಬಹುದೆಂದು ನನ್ನ ಸೂಚನೆ.

ಈ ಕವಿತೆಗಳನ್ನು ನನ್ನ ಸ್ನೇಹಿತರು ಅಭಿಮಾನದಿಂದ ಹಾಡಿ, ಹಾಡಿಸಿ ಮೆಚ್ಚಿದಾರೆ. ತೊಡಕು ಹಾದಿ ತುಳಿಯದಂತೆ ಎಚ್ಚರಿಸಿದಾರೆ. ಗೆಳೆತನದ ಅಮೃತ ಹರಿಸಿ ಹೃದಯ ತುಂಬಿಸಿದಾರೆ. ಅವರೆಲ್ಲರೂ ತೋರಿಸಿದ ವಿಶ್ವಾಸ, ಸಹಾನುಭೂತಿಗಳೇ ನನಗೆ ಸ್ಫೂರ್ತಿಕೊಟ್ಟುವು. ಈ ಕವಿತೆಗಳಲ್ಲಿ ಕೆಲವು ಪ್ರಬುದ್ಧಕರ್ಣಾಟಕ, ಜಯಂತಿ ಮುಂತಾದ ಪತ್ರಿಕೆಗಳಲ್ಲಿ ಈಗಾಗಲೇ ಬೆಳಕಿಗೆ ಬಂದಿವೆ. ಅವುಗಳನ್ನು ಪ್ರಕಟಿಸಿದ ಸಂಪಾದಕರಿಗೆ ನನ್ನ ನೆನಕೆಗಳು. ಈ ನನ್ನ ಪ್ರಾರಂಭಿಕ ರಚನೆಗಳನ್ನು ಕೇಳಿ ಉತ್ತೇಜನಕೊಟ್ಟ ಗೆಳೆಯರಿಗೂ, ಕನ್ನಡ ರಸಿಕರ ಮುಂದೆ ಇವುಗಳನ್ನಿಡಲು ನೆರವಾದ ಗೆಳೆಯ ಎಚ್. ಎಸ್. ದೊರೆಸ್ವಾಮಿಯವರಿಗೂ, ಅಚ್ಚುಕೂಟದ ಗೆ|| ಜಿ. ಎಚ್. ರಾಮರಾಯರಿಗೂ ನಾನು ಕೃತಜ್ಞ. ಕನ್ನಡ ಜನಕ್ಕೆ ಈ ಕಿರುಕಾಣಿಕೆ ಒಪ್ಪಿತೆಂದು ನನ್ನ ಬಯಕೆ.

**ಸರ್ವಜಿತ್ ಸಂವತ್ಸರ, ಉಗಾದಿ,**
**ಇಂಟರ್ಮೀಡಿಯೇಟ್ ಕಾಲೇಜು,**
**ಮೈಸೂರು.**

**ಎಸ್. ಅನಂತನಾರಾಯಣ**

# ವಿವರ


| | ಪುಟ | | ಪುಟ |
|---|---|---|---|
| ಅರ್ಪಣ .... .... | ೧ | ನಿನ್ನಲಂಕಾರ .... .... | ೨೨ |
| ಇದುವೆ ನನ್ನಯ ಸೇವೆ .... | ೨ | ಮಲ್ಲಿಗೆಯ ಮೊಗ್ಗುಗಳ ರಾಶಿ | ೨೩ |
| ಬಾರಯ್ಯ .... .... | ೩ | ಕವಿಯ ಕಣ್ಣು ತೆರೆಯುತಿತ್ತು | ೨೪ |
| ಹಳೆಯ ಹಾಡು .... | ೪ | ಆದರ್ಶಕ್ಕೆ .... .... | ೨೫ |
| ಭಾವ ಜೀವ .... .... | ೫ | ಸೌಂದರ್ಯಕ್ಕೆ .... | ೨೮ |
| ಒಮ್ಮೆ ಹಾಡಿದ ಹಾಡು .... | ೬ | ನಾಲ್ಕು ವರ್ಷದ ಕಾಲ .... | ೨೯ |
| ಕಂಗಳಿಂದಲಿ ನಿನ್ನ ನೆನಪು.... | ೭ | ಶೆಲ್ಲಿಗೆ .... .... | ೩೦ |
| ಕೊಡಗಿನ ಕರೆ .... | ೮ | ದೇವ ನೀನೈತಂದೆ .... | ೩೧ |
| ನನ್ನ ನಿನ್ನ ಅಂತರ .... | ೧೦ | ನನ್ನ ಜೀವನ ನದಿಯ ಎದೆ ಮೊರೆತ .... | ೩೨ |
| ಹೊಸ ಹರಯದಲಿ ಹೂವು.... | ೧೧ | ವೀರಗಲ್ಲು .... .... | ೩೩ |
| ಉರುಳಿರುವ ತಾರೆಗಳು .... | ೧೨ | ಗಾಂಧೀಜಿಗೆ .... .... | ೩೪ |
| ರೈತರ ಹಾಡು .... .... | ೧೪ | ಕಾಲನಾಗಗಳೊಡಲು ಜಗದಮನ | ೩೫ |
| ತಾರೆ-ಗರಿಕೆ .... .... | ೧೫ | ಓಡಿ ಬಾ .... .... | ೩೬ |
| ಹುಣ್ಣಿಮೆಯ ಚಂದ್ರಮನು.... | ೧೬ | ಬಾರೈ ದೇವ .... .... | ೩೯ |
| ಒಮ್ಮೊಮ್ಮೆ ಎನಿಸುವುದು .... | ೧೭ | ಸಿಂಕ್ಲೇರನಿಗೆ .... .... | ೪೦ |
| ಹೊನ್‌ಪದಕವೇಕೆ .... | ೧೮ | ಅದರ ಮಾತಿನ್ನೇಕೆ .... | ೪೩ |
| ಎರಡು ಅತ್ತ .... .... | ೧೯ | ನಿಜ ಬುದ್ಧ .... .... | ೪೪ |
| ಕನಸುನನಸುಗಳೆಲ್ಲ.... .... | ೨೦ | ಬಾಡದ ಹೂವು .... | ೪೭ |
| ಅರಿತವರು ಆರು ... | ೨೧ | | |

# ಅರ್ಪಣ

## ಉಷೆಗೆ

ಯುಗಯುಗಗಳೇಕಾಂತ ಗೀತಹಾಡುತನಂತ
ನೋವಿನಲಿ ಕಾತರಿಸೆ ನನ್ನ ಉಷೆ ಬಂದೆ!
ನಿನ್ನ ಬೆಳಕಲಿ ನಿನಗೆ ನನ್ನೆದೆಯ ಕಿರುಹಣತೆ
ಅರ್ಪಿಸಿದೆ-- ನೀನೊಪ್ಪಿ ಒಲವ ಬಾಳಿಸಿದೆ!

ನಾನು ಕವಿ—ನೀ ಕಾವ್ಯ—ನಾ ಬರೆದ ಗೀತಗಳು
ನಿನ್ನ ಒಲವಿನ ನೂರು ಸೊಗಸು ನೆರಳು.
ನೀ ಬೆಳಸಿ ಬಾಳಿಟ್ಟ ನನ್ನ ಕಾವ್ಯದ ಬಳ್ಳಿ
ಹೂವಿಡುವ ಮುನ್ನವೇ ನೀ ಬಾಡಿಹೋದೆ!

ಅಂದು ನೀನಿದ್ದಾಗ ಈ ಕವಿತೆಗಳ ಮಾಲೆ
ಒಲವ ಮಂಗಳ ಸೂತ್ರ ನಿನ್ನ ಕೊರಳಲ್ಲಿ!
ಆ ಆಸೆ ಇಂದೆಲ್ಲಿ—ಇವು ನಿನ್ನ ನೆನಪಿನಲಿ
ಒಲವು ನೀಡುತಲಿರುವ ಭಾವದಶ್ರುಗಳು!

# ಇದುವೆ ನನ್ನಯ ಸೇವೆ

ಸಾಹಿತ್ಯ ಸಾಗರದ ದಡದಿ ನಿಲ್ಲುತಲಂದು
ನೋಡಿದೆನು ಆಸೆಯಿಂ ಅಲೆಗಳೆಡೆಗೆ
ಒಳಗೆ ಹುದುಗಿಹ ಮುತ್ತುರತ್ನಗಳನೊಯ್ಯುವೆನೆ
ಕನ್ನಡಮ್ಮನ ಅಡಿಗೆ ಮಾಲೆಯಾಗಿಡಲು।

ದೂರದಿಂ ಕುಣಿಯುತ್ತ ಹತ್ತಿರಕೆ ಬಂದಿತಲೆ,
ನೋಡುತಲೆ ಧೀಗೆಟ್ಟೆ ರೌದ್ರರೂಪ!
ಸಾಗರದಿ ಮುಳುಗುತ್ತ ಮುತ್ತು ರತ್ನವನಾಯೆ
ಧೈರ್ಯಸಾಲದೆ ಅಂತೆ ನಿಂತೆ ಭ್ರಮೆಯೊಳಗೆ!

ಎದೆಯ ಕಂಬನಿ ಸುರಿಸಿ, ದಡದಿ ಮರಳಿನ ಮೇಲೆ
ಬಿದ್ದಿರುವ ಚಿಪ್ಪುಗಳನಾಯ್ದು ತಂದು
ಅಮ್ಮನಡಿಗಳಲಿಡುವೆ! ಇದುವೆ ನನ್ನಯ ಸೇವೆ!
ತಪ್ಪುನಡೆದರು ಅಪ್ಪಿ ಮುದ್ದಿಪುದು ಮಮತೆ!

# ಬಾರಯ್ಯ

ಬಾರಯ್ಯ   ಬಂದುದಕೆ ಏನನಾದರು ಕೊಟ್ಟು
ಕಳುಹಿಸುವೆ. ಕುಳಿತೆನ್ನ ಬಳಿಗೆ ಬಂದು
ಕೇಳುವೊಡೆ ಹಾಡುವೆನು -- ಅದು ಒಂದೆ ಸಂಪದವು
ಬೇಕಾದೊಡದನೀವೆ-- ಹಾಡುವೆನು ಕೇಳು !

# ಹಳೆಯ ಹಾಡು

ಯಾವುದಾದರು ಒಂದು
ಹಳೆಯ ಹಾಡೇ ಸಾಕು !
ಹೊಸ ರಾಗ—ಹೊಸ ತಾಳ
ಹೊಸಭಾವಗಳ ಮೇಳ
ಯಾವುದೊಂದೂ ಬೇಡ.
ಹೃದಯದೊಲವನು ಮೀಟಿ
ಒಲವ ನೀರನು ತರಿಸಿ
ಹೊಸ ರಾಗ—ಹೊಸ ತಾಳ
ಹೊಸ ಭಾವಗಳ ಮೇಳ
ಹಿಗ್ಗಿ ಹರಿಸುವ ಒಂದು
ಹಳೆಯ ಹಾಡು !

# ಭಾವ ಜೀವ

ಭೋರ್ಗರೆದು ಬರಸೆಳೆದು ಬಿರುಸಿನಲಿ ಚಿಮ್ಮಿಸೆದು
ಗಿರಗಿರನೆ ಸುರುಳಿಯಲಿ ಸೊರಗಿಸುವ ಸುಳಿಗಳಲಿ
ಸಿಕ್ಕಿದಂತೊಮ್ಮೊಮ್ಮೆ ಹೃದಯ ಬಲು ತಪಿಸುವುದು !
ನಭಕೇರಿ ಕೆಳಗುರುಳಿ ಭಾವಗಳ ಕಡಲಿನಲಿ
ಮಿಂದು ಮೈ ಬೆಂಡಾಗಿ ಬಸವಳಿದು ಬೀಳುವುದು !
ಮರು ನಿಮಿಷ ಮೆಲ್ಲೆಲರು ಮೃದು ಮಧುರ ನುಡಿಗಳಲಿ
ಮೆಲ್ಲಮೆಲ್ಲನೆ ಕರೆದು ಬೇರೊಂದ ತೋರುವುದು !
ಶಾಂತಿಯುಂಟೇನಿಲ್ಲಿ ಬರಿ ಭಾವ ಜೀವದಲಿ ?

ಮಾನಮೇಷಗಳೆಣಿಸಿ, ಕಾಲಕಾರ್ಯವ ಗುಣಿಸಿ
ಕಾರ್ಖಾನೆಯುಚ್ಚಂತೆ ಮಾಡಿ ಜೀವನವೆಲ್ಲ
ಕಾಣದಂತೆಯೆ ಮತ್ತೆ ಸಾಗಿಹೋಗುವರೆಲ್ಲ !
ಹೊಸತಿಲ್ಲ—ಹಳತಿಲ್ಲ—ಜೀವ ನಿತ್ಯದ ದಿನಸಿ !
ಇಂಥ ಬಾಳದು ಬಾಳೆ ?—ಭಾವಜೀವನೆ ಮೇಲು !
ಕಹಿಸಿಹಿಗಳೆಲ್ಲವಿದೆ ! ಅದಕಿಂತ ಬೇರೇನು ?

# ಒಮ್ಮೆ ಹಾಡಿದ ಹಾಡು

ಒಮ್ಮೆ ಹಾಡಿದ ಹಾಡು—
ಮತ್ತೊಮ್ಮೆ—ಹಾಡಲೆಂತೋ ಅರಿಯೆ.
ಒಮ್ಮೆ ಕಂಡಾ ಕನಸು
ಮತ್ತೊಮ್ಮೆ ಕಾಣಲೆಂತೋ ಅರಿಯೆ !
ಎಲ್ಲ ನಿನ್ನದೆ ಛಾಯೆ
ಹೃದಯದೊಲವೆ !

ಜೀವವೊಂದೇ ಅಹುದು,
ಬದುಕುಗಳು ಸಾಸಿರವ ಮಿಕ್ಕುವುವು !
ಭಾವವೊಂದೇ ಅಹುದು,
ರೂಪಗಳು—ಎಣಿಕೆಗೇ ಸಿಕ್ಕದವು !
ಎಲ್ಲ ನಿನ್ನದೆ ಮಾಯೆ
ಹೃದಯದೊಲವೆ !

# ಕಂಗಳಿಂದಲಿ ನಿನ್ನ ನೆನಪ ದೂಡುವುದೆಂತು ?

ಕಂಗಳಿಂದಲಿ ನಿನ್ನ ನೆನಪದೂಡುವುದೆಂತು ?
ಬೇಡಬೇಡೆಂದರೂ, ಅಲೆಮೇಲೆ ಅಲೆ ಬಂದು
ದಡವನೆಡೆಬಿಡದೆಯೇ ಮುತ್ತಿ ಮುತ್ತಿಕ್ಕುವೊಲು
ಕಳೆದ ಕಾಲದಲಳಿದ ಕನಸುಗಳು ಹೊರಬಂದು
ದುಗುಡ ಹರಡುತಲಿಹವು. ದಡದ ಮೇಲಿನ ಮರಳು
ಹನಿನೀರಿಗಾಗೊರಲಿ ಕೊರಗಿ ಬಿಸಿಯಾಗುವೊಲು
ಹೃದಯ ಹಸಿದಿದೆಯಿಂದು ಒಲವಿಗಾಗರಸುತಲಿ,
ಬಾರೆಂದು ಕರೆಯುತಿದೆ ನಿನಗಾಗಿ ಕಾತರದಿ !

ಹೊಸನೆಲೆಗಳರಸುತಲಿ ಹಳೆಯ ಪಳಕೆಯ ಹರಿದು,
ಒಂದು ಚಣ ಒಂದೆಡೆಗೆ ನಿಲ್ಲದೆಯೆ ಜಾರುತಿಹ
ಮುಗಿಲವೋಡದ ರೀತಿ ಮೆಲ್ಲಮೆಲ್ಲನೆ ಸರಿದು
ನುಸುಳಿದಳು ನನ್ನಿಂದ—ಅರಸುತ್ತ ಹೊಸಜನರ !
ಹೃದಯಶಾಂತಿಯೆ ಆಕೆ ಎನುವ ಭ್ರಾಂತಿಯುಲಾನು
ಹೆಣ್ಣಹುಡುಕುತ ಹೋಗಿ ಮುಳ್ಳ ಮುತ್ತಿಕ್ಕಿದೆನು !

# ಕೊಡಗಿನ ಕರೆ

ಅಮ್ಮನನು ಅಪ್ಪಿರುವ ಎಳೆಯ ಕಂದನ ತೆರದಿ
ಮೈಸೂರ ಕಂಕುಳಲಿ ಕೊಡಗ ನಾಡು
ಗಿರಿಶಿಖರ ಮಲೆಮೌನ, ಕಾಡುಕಳುಪುವ ಕಂಪು
ತೊರೆಯನೀರಿನ ಗೀತ ಸೊಗದ ಬೀಡು !

ಕಾವೇರಿ ಬರುತಿಹಳು ಕೊಡಗಿನಲಿ ಜನಿಸುತ್ತ
ಅಂಕು ಡೊಂಕಿನ ಕೊಂಕು ಬಿಂಕದಿಂದ,
ಸಂದೇಶ ತರುತಿಹಳು ಕೊಡಗ ನಾಡೊಳಗಿಂದ
ಜಗಕೆಲ್ಲ ಬಂದದನು ನೋಡಿರೆನುತ !

ಕೊಡಗಸೀಮೆಯ ಬೆಡಗು ಮಲೆಗಳಾ ಮೌನವನು
ಬಾಲೆಯರ ಬಿನ್ನಾಣ, ಬಿಂಕದಾಟ,
ರಮಣಿಯರ ಭೀರುತನ, ಎಲ್ಲವನು ಬಿಂಬಿಸುತ
ಕೊಡಗ ಪುತ್ರಿಯು ಭರದಿ ಹರಿಯುತಿಹಳು !

ಕೊಡಗ ಕಿತ್ತಳೆಹಣ್ಣು ನೋಡಿ ನೆನಪಾಯ್ತೆನಗೆ
ಮಡಿಕೇರಿ ಬಳಿಯಿರುವ ಕೊಡಗ ಕುವರಿ,
—ನೋಡಿದುದು ಒಂದೆ ಚಣ, ಮೂಡಿದಳು ಮನದಲ್ಲಿ
ಮರೆಯಲಾರೆನು ಅವಳ ನಿಲುವ ಚೆಲುವ !

ಬೆಳ್ಳಿಯಂಚಿನ ಕಪ್ಪುಬಣ್ಣ ಸೀರೆಯನುಟ್ಟು
ಸಡಗರದಿ ಒಡನಾಡಿಯೊಡಗೂಡುತ
ಮುಗಿಲ ಬಣ್ಣದ ರವಿಕೆ ತೊಟ್ಟಿಹಳು, ಮಲ್ಲಿಗೆಯ
ಮುಡಿದಿಹಳು, ಜೋಲುತಿದೆ ಜಡೆಯು ಕೆಳಗೆ !

ಕಳಿತ ಕಿತ್ತಳೆ ವರ್ಣ, ಮಿದುವಾದ ಕೆನ್ನೆಗಳು,
ತೊಳೆಯಂತೆ ರಸ ತುಂಬಿದಾತುಟಿಗಳು,
ನಿಲುವಿನಲಿ ವೈಯಾರ, ನೋಟದಲಿ ದಿಟ್ಟತನ
ಬಿನ್ನಾಣ ಬೆಡಗುಗಳ ಹಾಸಮಯಿಯು !

ನೋಡಿದುದು ಒಂದೆ ಚಣ ಮೂಡಿದಳು ಮನದಲ್ಲಿ
ನೋಡಬೇಕೆಂಬುವಾ ಬಯಕೆ ಬಹಳ !
ಕನಸಿನಲಿ ಕುಣಿಯುತ್ತ ಕೆಲೆಯುತ್ತ ಕಾಣುವುದು
ಅವಳ ರೂಪವು—ಅದುವೆ ಕೊಡಗ ಕರೆಯು !

# ನನ್ನ—ನಿನ್ನ ಅಂತರ!

ನಿನ್ನದು ಆ ತೀರ—ನನ್ನದು ಈ ತೀರ
ನಟ್ಟನಡುವಿನಂತರ, ತೊರೆಯ ಅಭ್ಯಂತರ
ಕಿರಿದಹುದು ಕಿರಿದಲ್ಲ—ಹಿರಿದಲ್ಲ ಹಿರಿದಹುದು
ಕಿರುತೊರೆಯ ಅಂತರ—ಕಡಲಿನಂತರ!

ಹರಿಯುವಲೆಗಳಂತೆನ್ನ ಮನಸಿನಾತುರ
ಹರಿಯುತಿದೆ, ಕೊರೆಯುತಿದೆ ಒಲವ ಕಾತರ
ಮೌನದಲ್ಲೆ ಮರುಗಿಸಿದೆ ಹೃದಯದ ಭಾರ.
ಕಿರುತೊರೆಯ ಅಂತರ—ಕಡಲಿನಂತರ!

ಮುಗಿಲಿನ ಮಡಿಲಿನಲ್ಲಿ ನೋಡದ ಮರೆಗೆ
ಮಿಣುಕುತಿರುವ ತಾರೆಗಿಂತ ದೂರ ಆಚೆಗೆ
ಸಾಗುವಾಸೆ ಆಗಿಹೋಯ್ತು—ಎದೆಯ ಸುಡುಹೊಗೆ!
ಕಿರುತೊರೆಯ ಅಂತರ—ಕಡಲಿನಂತರ!

ಈ ತೀರ—ಆ ತೀರ—ಎಂದೆಂದು ಬಲುದೂರ
ಸಂಧಿಸಲು ಹವಣುಂಟು—ನಟ್ಟನಡುವಿನಂತರ
ಬಲು ಕಿರಿದು ನಾಲ್ಕುಗೇಣು, ಹವಣೆಲ್ಲ ಹುಡಿದಾರ
ಕಿರುತೊರೆಯ ಅಂತರ—ಕಡಲಿನಂತರ!

# ಹೊಸ ಹರಯದಲಿ ಹೂವು

ಹೊಸ ಹರಯದಲಿ ಹೂವು ಅರಳುತ್ತ ಮೊಗೆಮೊಗೆದು
ಮಾಧುರ್ಯವನು ಬೀರಿ ಹಿಗ್ಗಿನಲಿ ಕುಣಿಯುತಿರೆ
ದೂರದಿಂ ಹಾರುತ್ತ ದುಂಬಿ ಅದರೆಡೆ ನಡೆದು
ತನ್ನಿಚ್ಛೆ ಝೇಂಕರಿಸಿ ಹೂಂಕರಿಸಿ ಹೂವಿನೆಡೆ
ದಿಟ್ಟಿಸುತ ಸುತ್ತೆಲ್ಲ ಸುತ್ತಿ ಸುಳಿದಾಡುವೊಲು,
ಸಾವ ಛಾಯೆಯು ಬಂದು ಮನದ ಹಿನ್ನೆಲೆಯಲ್ಲಿ
ಗುಂಯ್ಗುಟ್ಟಿ ಕೊರಗಿಸಿದೆ-ಮನಸು ಕಾತರಿಸಿಹುದು
—"ಹರಯದಲೆ ಬೀಳುವುದೆ ಸಾವಿನಾಟಗಳಲ್ಲಿ?"—

ನಿನ್ನ ತುಟಿಗಳಲಿರುವ ಕಲ್ಪನೆಯ ರಸದೂಟ
ಕಣ್ಣ ಮಿಂಚಲಿ ಕೂಡಿ ಹೊಂಚುತಿಹ ಹೊಸಹಾಸ
ಹೊತ್ತಿಸಿದ ಎಳೆಯ ನಗು ಮನಕೆ ಮಾಡಿದ ಮಾಟ,
ಆ ರೂಪ, ಆ ನೋಟ, ಸೌಂದರ್ಯದಾಸೆಳೆತ
ನನಸಿನಲಿ ದೊರಕದಿಹುದಲ್ಲಿ ದೊರಕುವುದೆಂಬ
ಇಂಬಿರಲು, ಸಾವನಪ್ಪುವ ಆಸೆ ಎದೆ ತುಂಬ!

# ಉರುಳಿರುವ ತಾರೆಗಳು

ಉರುಳಿರುವ ತಾರೆಗಳಿಗಳುತ ನಿಲ್ಲುವರುಂಟೆ ?
ಮೂಡಿರಲು ಮೂಡಲಲಿ ಉದಯದರಳಿನ ಕಂಪು
ಕಳೆದ ಕಾಲದ ತಂಟೆ
ಇಂದೇಕೆ ?–ಹೊಸ ತಂಪು

ಹೃದಯದೊಳಗರಳಿರಲು, ಕಂಪು ಸವಿವುದಬಿಟ್ಟು
ಅಳಿದ ಕನಸುಗಳನ್ನು —ಸತ್ವವಿಲ್ಲದ ಹೊಟ್ಟು
ಅದು ಎಂಬುದನೆ
ನೀ ನಂಬದೆಯೆ
ಮೊಗೆಮೊಗೆದು
ಮೇಲೆಸೆದು

ಆನಂದ ಪಡಲೆಂದು
ಚಿಂತಿಸುತ ನೀನಿಂದು
ಎಲ್ಲ ಮಣ್ಣೂಡಿಸಿಹೆ
—ಕಾಲ ಸಾಗುತ್ತಲಿದೆ !

ಕಾಲಜೇಡನು ನೇದ ಬಲೆಯು ಜೀವದ ಗೋರಿ
ಅದರ ಗರ್ಭದಲಿಹುದು ಮತ್ತೆ ಹಿಂತಿರುಗುವುದೆ ?
ನಿನ್ನೆ ಕೊಚ್ಚೆಯ ಮೋರಿ
ಅಲ್ಲಿ ಮುತ್ತುರಸುವುದೆ ?

ಅಂತಾದರೂ ಇಂದು ಪ್ರೇಮದೆದೆ ಬಳ್ಳಿಯಲಿ
ನಿನ್ನ ಜೀವನವರಳಿ, ಹೃದಯದಾನಂದದುಲಿ

ಹೊರಹೊಮ್ಮುತಿರೆ
ಸುಖ ನಿನ್ನುಸಿರೆ
    ಆಗುತಿರೆ
    ಆದನೆ ನೆರೆ
ಮರೆತು ಕಳೆದುದ ನೆನೆದು
ದುಗುಡದೊಳಗಿಳಿದಿಳಿದು
    ಎಲ್ಲ ಮಣ್ಣಾಡಿಸಿಹೆ
    —ಕಾಲ ಸಾಗುತ್ತಲಿದೆ !

# ರೈತರ ಹಾಡು

ದುಡಿಯುತಿಹರೂ ನಾವೆ
ಮಡಿಯುತಿಹರೂ ನಾವೆ
ಜಗಕೆ ಅನ್ನವ ನೀಡುತಿಹರು ನಾವೆ!
ತುತ್ತೊಂದು ಅನ್ನವನು ಬೇಡುತಿಹೆವು!
ನಿಮಗಾಗಿ ಜೀವನವ ಸವೆಸುತಿಹೆವು!

ಮೈಯ ದಂಡಿಪರಾವು
ರಕ್ತ ಹರಿಸುವರಾವು
ದಿನವು ಜನ್ಮವ ತೇಯುತಿಹರು ನಾವು!
ಧನಿಕರಿಗೆ ಹೊನ್ನ ಬಣ ಕೂಡಿಸಿಹೆವು
ಕುರುಡುಕಾಸಿನ ಭಿಕ್ಷ ಬೇಡುತಿಹೆವು!

ಭುವಿಯನುಳುವವರಾವು
ಭುವಿಗೆ ಉರುಳುವರಾವು
ಕಾಳ ಕೆತ್ತುತ ಮಡಿವ ರೈತರಾವು
ತುತ್ತಿಲ್ಲದೆಯೆ ಹೆಣದ ರಾಸಿ ಬಿದ್ದಿಹುದು!
ಕಳಿತ ಹೆಣ, ಕೊಳೆತ ಹೆಣ–ಕೇಳ್ವರಾರು!

ಹಣದ ಕಣಜಗಳಾವು
ಹೆಣದ ವಂಶಜರಾವು
ಸಾವಿಲ್ಲದಿಹ ಅಮರ ಪ್ರೇತವಾವು
ಜೀವವಿಲ್ಲದ ಬರಿಯ ಮೂಳೆ ಮೂಟೆಗಳು!
ಹೊಟ್ಟೆ ಹಸಿವಿನ ಕೊರಗ ಕ್ರಾಂತಿಯೂಟೆಗಳು!

# ತಾರೆ—ಗರಿಕೆ

ತಾರೆ ಬೆಳಗುತಲಿತ್ತು ಆಗಸದಿ ನಗುನಗುತ
ಹುಲ್ಲು ಗರಿಕೆಯದೊಂದು ನೆಲದಿ ನಿಂತು
ಮೇಲೆ ನೋಡುತಲವಳ ಬೆಳಕು ಬಿನ್ನಾಣಗಳ
ಕಂಡು ಬೆರಗಾಗುತಲಿ ಕರೆಯಿತಿಂತು !

" ಬಾರೆನ್ನ ಮನದನ್ನೆ-ತಾರಕೆಯೆ ಬಾರೆನ್ನ
ಮನದ ಚಿಂತೆಯನಳಿಸಿ ಶಾಂತಿ ನೀಡು."
ಗರಿಕೆ ವಿರಹದಿ ಸೊರಗಿ ಬಾರೆಂದು ಕರೆಯುತಿರೆ
ತಾರೆ ಗರ್ವದಿ ಕುಳಿತು ನಗುತಲಿತ್ತು !

" ನಾನು ಆಗಸದಾಕೆ, ನೀನು ಭೂಮಿಯ ಕ್ರಿಮಿಯು
ನನ್ನ ಉನ್ನತ ದೇಶ ತೊರೆದು ಬರಲೆ !
ಹುಚ್ಚ ! ನನ್ನೊಲವನ್ನು ಬೇಡುವೊಡೆ ನೀ ಮೂರ್ಖ !
ನಿನಗಾಗಿ ಸೌಂದರ್ಯ ಉರುಳಿಸುವುದೆ ? "

ಎನುತ ಯೌವನದಲ್ಲಿ ತಾರೆ ಗರ್ವದ ಭರದಿ
ಹುಲ್ಲುಗರಿಕೆಯ ಒಲವ ಹಂಗಿಸಿರಲು
ಗರಿಕೆ ತನ್ನೆದೆಯೊಲವು ಬಾಡಿಹೋದುದ ಕಂಡು
ವಿರಹದಲಿ ಒಲವಿನೊಲು ಬಾಡಿಹೋಯ್ತು !

# ಹುಣ್ಣಿಮೆಯ ಚಂದ್ರಮನು

ಹುಣ್ಣಿಮೆಯ ಚಂದ್ರಮನು ಮೋಡಗಳ ಬಲೆಯಿಂದ
ಮೆಲ್ಲಮೆಲ್ಲನೆ ಜಾರಿ ಮುಂದೆ ಓಡುತಲಿರಲು
ಉಷೆಯಕಡೆ ಕಾಲದಲ್ಲೋಲ ಸಾಗರದಿಂದ
ಒಂದಾದಮೇಲೊಂದು ಅಲೆಬಂದು ಅಳಿದಿರಲು
ಮೌನದಲಿ–ನಾನಿನ್ನ ಎಚ್ಚತ್ತು ಮಲಗಿರುವೆ!
ಹಿಂದೊಂದು ದಿನ ಇಂಥ ರಾತ್ರಿಯಲೆ ನಾನೆನ್ನ
ಒಲವಿನಕ್ಕನನೊಯ್ದು ಮಸಣದಲ್ಲುರಿಯುಡಿಗೆ
ಆಹುತಿಯನಿತ್ತಿದ್ದೆ–ಮೃತ್ಯುವಿಗೆ ಮೊದಲನ್ನ!
ನಿನ್ನಲೆನ್ನಯ ಅಳಿದ ಅಕ್ಕನದೆ ಮುಖಛಾಯೆ
ಮೂಡಿರಲು ನೀನೆನ್ನ ಸೋದರಿಯು ಎನ್ನುತಲಿ
ಮನ ನಿನ್ನನಾಶಿಸಿತು. ಆ ಒಲವಿನದೆ ಮಾಯೆ
ನನ್ನೆಲ್ಲವನು ಮುಸುಕಿದುಗುಡದಲಿ ದೂಡುತಲಿ
ಕ್ಷಣಕ್ಷಣಕು ನಿನ್ನನೇ ನೆನವಿಂಗೆ ತರುತಿಹುದು!
ಮೌನದಲಿ ಎಚ್ಚತ್ತ ಕಾಲದಲೆ ಸಾಗಿಹುದು!

# *ಒಮ್ಮೊಮ್ಮೆ ಎನಿಸುವುದು

ಒಮ್ಮೊಮ್ಮೆ ಎನಿಸುವುದು ಜೀವವಾರಿದಮೇಲೆ
ಸುಖಸ್ವಪ್ನಗಳ ಬಿಂಬ ಮೂಡುವುದು ಎಂದು,
ಕೊಳದ ನೀರಲೆಯಳಿದು ಮೌನದಲಿ ಮಲಗಿರಲು
ಸೌಂದರ್ಯದಾಗಸವ ಬಿಂಬಿಸುವ ತೆರದಿ!

ಆದರೆಂತೋ ಏನೊ!–ಅಂತಾದರೆನಿತುಸುಖ,
ಬಾಳದುಸ್ವಪ್ನವನು ಮರೆಯಬಹುದಾಗ!
ಜೀವದೊಳಗಿಲ್ಲದುದ ಸಾವಿನಲಿ ಪಡೆಯುತಲಿ
ನೋವಿಲ್ಲದೊಲವಿಂದ ಸವಿಯಬಹುದಾಗ!

# ಹೊನ್ ಪದಕವೇಕೆ ?

ನನ್ನ ಕವಿಯೆಂದೆನುವ ಮೆಚ್ಚುಮಾತೇಕೆ ?
ಪದದ ಸಮ್ಮಿಳನವೋ ಈ ನನ್ನ ಕವಿತೆ !
ಎದೆಯ ಉಮ್ಮಳವಿದುವೆ, ಅದು ನಿನ್ನ ಕುರಿತೆ
ಕೊರಗುತಿಹೆ ಕೊರಳಿದಕೆ ಹೊನ್ ಪದಕವೇಕೆ ?

ಇದು ಕವಿತೆಯಹುದೆನುವ ಮಾತು ಸರಿಯಲ್ಲ
-ಕವಿಯು ನಾನಲ್ಲ -
ಇದು ನಿನ್ನ ನೂರಾರು ಛಾಯೆಗಳ ಒರೆಗಲ್ಲ
ಮೇಲೆ ನಾ ಮೂಡಿಸಿದ ಎದೆಯ ಹೊನ್ನು !
-ನೀನು ಅರಿತಿಲ್ಲ-
ಇದನೆ ನೀನೊಪ್ಪದಿರೆ ಮುಂದಕೇನಿನ್ನು ?

# ಎರಡು ಆತ್ಮ

ಆಗಸದ ಸಿಡಿಲಂತೆ ಸಿಡಿಯುತಿದೆ
-ನನ್ನಾತ್ಮ
ಸಾಗರದ ಒಡಲಂತೆ ಮಿಡಿಯುತಿದೆ
-ಒಲವಾತ್ಮ
ಗಾಳಿಯಾ ಮಡಿಲಂತೆ ನಗುತಲಿದೆ
-ನಿನ್ನಾತ್ಮ !

# ಕನಸು ನನಸುಗಳೆಲ್ಲ ಯಾರಿಗೋ ಮುಡಿಪಾಗಿ

ಕನಸು ನನಸುಗಳೆಲ್ಲ ಯಾರಿಗೋ ಮುಡಿಪಾಗಿ
ಹಾಡುಗಳಲೆಲ್ಲೆಲ್ಲು ಯಾರದೋ ಛಾಯೆಯೇ
ಮೂಡಿರಲು "ಇದು ಯಾರೊ?" ಎನುತ ಕಾತರರಾಗಿ
ಗೆಳೆಯರೆಲ್ಲರು ನನ್ನ ಕಾಡುತಿರೆ, ನಿನ್ನನೇ
ಬಣ್ಣಿಸಲು ಹೊರಟಿಹೆನು–ನಿನ್ನ ನೆನವಿನಲೆನ್ನ
ಮನದ ಮಾತುಗಳೆಲ್ಲ ರಂಗಾಗಿ ಹಾರುತಿವೆ!
ಒಂದು ಸಂಜೆಯ ಕನಸು ಬಾಳಿನಿರುಳಿನ ಮುನ್ನ
ಮೆರೆದು ಮರೆಯಾಗುವೊಲು ದುಗುಡದಲಿ ಮಾಸುತಿವೆ!

ಮೌನದಲಿ ದುಗುಡದಲಿ ಮುದುಡಿರಲು ಮನದೊಲವು
ಬಣ್ಣನೆಯ ಬಣ್ಣಕ್ಕೆ ನಿಲುಕದಿರೆ ಅದನೆಂತು
ಅರಿಯುವುದು, ಅರಸುವುದು? ಎದೆಯ ಕಂಬನಿ ಹರಿದು
ಬಾಳ ಬಳಸುತಲಿಹುದು! ನಿನ್ನೊಲವ ಸುಖವಂತು
ಮುಗಿಲ ಮೋಡದ ಹಾಗೆ ಮಾಯವಾಗಿರಲಿಂದು
ಉಳಿದಿಹುದು ಕಂಗಳಿಗೆ ನಿನ್ನ ನೆನಪಿನ ಬಿಂದು!

# ಅರಿತವರು ಆರು ?

ಜಗವೊಂದು ಬಂದರೀ ಜೀವಸಾಗರದಲ್ಲಿ
　ಹಡಗುಗಳು ಐತಂದು ಕೂಡುವುವು ದಿನವು,
ತೆರತೆರದ ಜನರಿಹರು–ವಿಧವಿಧದ ಭಾಷೆಗಳು
　ಚಣಕಾಲ ಸಂಧಿಸುತ ಮೆರೆವುವಲ್ಲಿ !

ನಾಲ್ಕು ದಿನಗಳ ಜೀವ, ಒಂದಿರುಳ ಪ್ರೇಮ !
　ಮುಂದೆಲ್ಲಿಗೋ ಪಯಣ, ಎಂದೊ ಮಿಲನ ?
ಪಯಣದಲಿ ಸಾಗರದಿ ಕಡುತೆರದ ಕಷ್ಟಗಳು,
　ಕಾದಿಹುದು ಮುಂದೇನೊ ಅರಿತವರು ಆರು ?

# ನಿನ್ನಲಂಕಾರ

ಎಣ್ಣೆಗೆಂಪಿನ ಮೇಲೆ ಹಾಲ್ಕೆನೆಯ ಲೇಪನದ
ಕೆನ್ನೆಯೇನಲ್ಲ, ಹೂ ಮೃದುತೆಯೇನಿಲ್ಲ!
ತುಟಿ ಬಹಳ ಕೆಂಪಿಲ್ಲ! ಕಂಡೊಡನೆಯೇ ಸೆಳೆವ
ಮೆಲುನಗುವು ಅದರ ಮೇಲ್ಸುಳಿದುದೇ ಇಲ್ಲ!

ಮಾತುಗಳಲೇನಂಥ ಮಾಧುರ್ಯವೇನಿಲ್ಲ
ಬೆಡಗು ಬಿನ್ನಾಣಗಳು ಚೆಲುವಿಕೆಯು ಇಲ್ಲ!
ಕವಿಗಳೊಲಿವಂದದಲಿ ಕಂಗಳಲಿ ಮಿಂಚಿಲ್ಲ
ಕಣ್ಣೀರು ಮುತ್ತಲ್ಲ–ತಾರಕೆಯು ಅಲ್ಲ!

ಇಂತಾದರೂ ಇವನು ಏತಕಾಗೆಲ್ಲವನು
ಆಕೆಗರ್ಪಿಸಿ ಕೊರಗಿ ಕಾತರಿಸುತಿರುವ?
ಹುಚ್ಚನಿವ! ಎನ್ನುವರು–ಅರಿವರೇ ಇದನವರು?
ಹೃದಯ ಸೆಳೆದುದೆ ನಿನಗೆ ಹಿರಿಯಲಂಕಾರ!

# ಮಲ್ಲಿಗೆಯ ಮೊಗ್ಗುಗಳ ರಾಸಿ

(ಹುಡುಗಿಯರ ನಗು ಕೇಳಿ ಬರೆದುದು)

ಮಲ್ಲಿಗೆಯ ಮೊಗ್ಗುಗಳ ರಾಸಿ ಅರಳಿರಲದರ
ನಡುವೆ ಅರೆ ಎಚ್ಚರದಿ ಇರವನೇ ಅರೆಮರೆತು
ಕಂಪಿನಿಂದಾತ್ಮವನು, ಹೃದಯವನು, ತುಂಬಿಸುತ
ಬೇರೊಂದು ವಿಶ್ವವನೆ ಸೇರಿದಂತಾಗುವುದು
ನಿಮ್ಮ ಕಿಲಕಿಲ ನಗುವು ದೂರದಿಂ ಗಾಳಿಯಲಿ
ತುಂಬಿ ತೂರುತ ನನ್ನ ಹೃದಯದೆಡೆ ಸಾಗಿರಲು.
ವೀಣೆಯಿಂ ಹೊರಹೊಮ್ಮಿ ಗಾನ ತುಳುಕಾಡುತಲಿ
ಜಗದ ಮೈಮರೆಸುವೊಲು, ರಕ್ತ ನುಡಿಸುತಲಿಹುದು!

ನಗುವಂತು ಬಲು ಸೊಗಸು–ಮನವನೇ ಮರೆಸುವುದು!
ಮುನಿಸು ಮನದಲಿ ಕುಳಿತು ಮುಗುಳು ಮೊಗ್ಗಾದಂತೆ
ಕಂಗಳಲಿ ಬೇರೊಂದು ಬಗೆಯ ಬೆಳಕೇ ಹೊಳೆದು
ಎನ್ನೆದೆಯ ಸೆಳೆಯುವುದು ಒಮ್ಮೆಗೇ ನಿಮ್ಮೆಡೆಗೆ!
ನಗುವಿನಲಿ ನಿಮ್ಮ ಮುಖ ಹಗಲ ಮುಗಿಲಿನ ಹಾಗೆ!
ಮುನಿಸಿನಲಿ ಮಿಗಿಲು ಸೊಗ-ಸಂಜೆ ಮೋಡದ ಹಾಗೆ!

# ಕವಿಯ ಕಣ್ಣು ತೆರೆಯುತಿತ್ತು

ಮನಸಿನಾಗಿನ ಭಾವಗಳಂತೆ
ಮರದ ಮೇಲಿನ ಚಿಗುರೆಲೆಯೆಲ್ಲ
ತೂರಿಬಂದ ಗಾಳಿಯಲ್ಲಿ
ಕುಣಿಯುತಿತ್ತು–ಬಳುಕಿ ಬಳುಕಿ–ಕುಣಿಯುತಿತ್ತು.

ತುಟಿಯ ಮೇಲಿನ ಮುಗುಳಿನ ಹಾಗೆ
ಸುತ್ತ ಹಾಸಿದ ಹಸುರಿನ ಮೇಲೆ
ಹಾರಿಬಂದ ಚಿಟ್ಟೆ ದಂಡು
ಜಿಗಿಯುತಿತ್ತು–ನಲಿದು ನಲಿದು–ಜಿಗಿಯುತಿತ್ತು

ಮೋರೆ ಮೇಲಿನ ಕುರುಳಿನ ಹಾಗೆ
ಗಾಳಿಯಲೆಗಳ ಪದರದ ಮೇಲೆ
ಮರದ ಪ್ರೊಟರೆ ಕೊಟ್ಟ ಹಾಡು
ಸಾರುತಿತ್ತು–ಅತ್ತ ಇತ್ತ–ಸಾರುತಿತ್ತು

ಹೆಣ್ಣ ಕಣ್ಣಿನ ಕರುಣೆಯ ಭರದಿ
ಬಣ್ಣ ಮಾಸಿದ ಭೂಮಿಯ ಮೇಲೆ
ರವಿಯ ಕಿರಣ ಹೊಳೆಯುತಿರಲು
ತೆರೆಯುತಿತ್ತು–ಕವಿಯ ಕಣ್ಣು–ತೆರೆಯುತಿತ್ತು !

# ಆದರ್ಶಕ್ಕೆ

ದೂರದೂರ ದಿಕ್ದಿಗಂತದಿಂದ ದೂರಕೆ
ಹಗಲು ಮುಗಿಲು ಮಿಲನವಾಗಿ ಕುಣಿಯುತಿರುವೆಡೆ
ಜಗವೆ ಒಲವ ಕೊಳಲು ಆಗಿ ಗಾನ ಸುರಿವೆಡೆ
ಸಾಗುತಿಹುದು ಜೀವ ನಿನ್ನ ಮೂರ್ತಿಯರಸುತೆ !
ಕಣ್ಣು ಮುಚ್ಚಿ
ಹೃದಯ ಬಿಚ್ಚಿ
ಒಮ್ಮೆ ಅಂದು ಕಾತರಿಸಲು
ಮಿಂಚಿನಂತೆ ತೂರಿ ನೀನು
ಜೀವ ತೋರಿದೆ
ಒಲವ ಕಲಕಿದೆ !
ಯಾರಿಗಾಗಿ ಕೊರಗುತಿಹೆನೊ ಅದನೆ ಅರಿಯದೆ
ಸಾಗುತಿಹುದು ಜೀವ ನಿನ್ನ ನೆಲೆಯ ಕಾಣದೆ ! ೧

ಎಲ್ಲಿಡೆಯಲು ಬೆಳಕು ಇರಲು ನನಗೆ ಕತ್ತಲು !
ಅಲೆಗಳಂತೆ ಜಿಗಿದು ಜಿಗಿದ ಬಾಳು ಬತ್ತಲು
ಕಂಡುದೊಮ್ಮೆ–ಕಾಂಬುದೆಲ್ಲಿ–ಶೂನ್ಯ ಸುತ್ತಲು !
ಸಾಗುತಿಹುದು ಜೀವ ನಿನ್ನ ಮೂರ್ತಿಯರಸುತೆ !
ಮನಸು ಸೊರಗಿ
ಜೀವ ಕೊರಗಿ
ಸುತ್ತಮುತ್ತ ತಿರುಗಿ ತಿರುಗಿ
ಮೌನದಲ್ಲೆ ಮರುಗಿ ಮರುಗಿ
ನಿನ್ನ ಕಾಣದೆ
ಬಾಡಿ ಒರಗಿದೆ !

ಕಾಲ ದುಗುಡದಾಳದಲ್ಲಿ ಹರಿದು ಸಾಗಿದೆ
ಸಾಗುತಿಹುದು ಜೀವನಿನ್ನ ನೆಲೆಯ ಕಾಣದೆ! ೧

ಎಳೆಮಂಜಿನ ಮೇಲ್ಮೈಯಿನ ಮೃದುತೆಯಂತಿದೆ
ಎಳೆಹರಯದ ದಳಗಳೊಳಗೆ ಹುದುಗಿ ಹೋಗಿರೆ
ಬೀಗಿ ಬಳುಕಿ ಸಾರಿಹೋದ ಬೆಳಗಿನ ಕನಸೆ!
ಸಾಗುತಿಹುದು ಜೀವ ನಿನ್ನ ಮೂರ್ತಿಯರಸುತೆ!
ತಾಯ ಮಮತೆ
ಎದೆಯ ಕೊರತೆ
ನೀಗುತೆನ್ನ ಮನಕೆ ಶಾಂತಿ
ತರುವುದೆಂಬ ಬಯಕೆ ಭ್ರಾಂತಿ
ಕಂಡುದೇನನು ?
—ತನ್ನತನವನು !
ಪ್ರೇಮ ತನ್ನ ಬೆಲೆಯಿದೆಂದು ಬೇಡಲು ಬಹುದೆ?
ಸಾಗುತಿಹುದು ಜೀವ ನಿನ್ನ ನೆಲೆಯ ಕಾಣದೆ! ೨

ಹೆಣ್ಣೊಂದರ ಕಣ್ಣಿನಲ್ಲಿ ಮಿಂಚಿನ ಮಿಣುಕು
ಕಂಡೆನೊಮ್ಮೆ ಅಲ್ಲೆ ಇಹುದು ಒಲವಿನ ಬದುಕು
ಎನುತ ಹಾರಿಹೋದೆನಾಗ ಆಕೆಯ ಬಳಿಗು
ಸಾಗುತಿರಲು ಜೀವ ನಿನ್ನ ಮೂರ್ತಿಯರಸುತೆ!
ಇನಿತು ದಿನವು
ಕಾಣದಿರವು
ಹೃದಯ ಬಯಸಿ ಬೆಳೆಸಿದೊಲವು
ಹೂವಾಗಿದೆ ಆಕೆ ಚೆಲುವು

ಎನುವ ಭರವಸೆ
ಎದೆಯ ತುಂಬಿರೆ
ಆಸೆಯೊಡೆದು ಒಲವು ಸಿಡಿದು ಹೃದಯ ಬಿರಿದಿದೆ!
ಸಾಗುತಿಹುದು ಜೀವ ನಿನ್ನ ನೆಲೆಯ ಕಾಣದೆ! ೪

ಮುಳುಗುತಿರುವ ತಾರೆ ತನ್ನ ಕಂಗಳ ತೊಳೆದು
ಕಳುಹುತಿರಲು ಭುವಿಯ ಕಡೆಗೆ ಮಂಜಿನ ಹರಳು
ಹಾತೊರೆಯುತ ಕಾಯುವಂತೆ ಹೂವಿನ ಎದೆಯು
ಸಾಗುತಿಹುದು ಜೀವ ನಿನ್ನ ಮೂರ್ತಿಯರಸುತೆ!
ನೆಲೆಯನರಸಿ
ಬದುಕ ಸವೆಸಿ
ಕೊನೆಯಿಲ್ಲದ ಕಡಲಿನಲ್ಲಿ
ಕೊರಗು ಕೊಟ್ಟ ದೋಣಿಯಲ್ಲಿ
ಅಲೆಗೆ ಬೆದರುತೆ
ಜೀವ ಸಾಗಿದೆ!
ಒಲವವಸತಿ ಕಾತರಿಸಿದೆ ನಾಳೆಯರಿಯದೆ!
ಸಾಗುತಿಹುದು ಜೀವ ನಿನ್ನ ನೆಲೆಯ ಕಾಣದೆ! ೫

# ಸೌಂದರ್ಯಕ್ಕೆ

ನೆರಳನರಸುವ ಕೂಸು ತನ್ನ ಎಳೆ ಕೈಗಳಲಿ
ಅದ ಹಿಡಿದು ತನ್ನೊಡನೆ ಆಟಕುಪಯೋಗಿಸುವ
ಎಳೆ ಚಪಲಕೀಡಾಗಿ–ಹಿಗ್ಗಿನಲಿ ಓಡುತಲಿ
ಅದರೆಡೆಗೆ ನಡೆದಾಗ, ನೆರಳು ಕೈಗಳ ಹಿಡಿತ
ತಪ್ಪಿಸುತ ಜಾರಿರಲು, ಕಣ್ಣೀರ ಕರೆಯುತ್ತ
ತಾಯ ಮಡಿಲಲಿ ತನ್ನ ದುಗುಡ ಹರಿಸುವ ಹಾಗೆ,
ಸಂತಸದ ನೆರಳರಸಿ, ಒಲವಿನೆದೆ ಬಯಸುತ್ತ,
—ಕಣ್ಣೆವೆಯ ಮುಚ್ಚದಿಹ ಮುಗಿಲ ತಾರೆಯ ಹಾಗೆ
ಬಾಳದುಸ್ವಪ್ನಗಳ ಅಲೆಗಳಲಿ ಸಿಕ್ಕುತಲಿ
ಹೃದಯದೊಲವಾಸೆಗಳು ಚೂರು ಚೂರಾಗುವುದ
ಕಂಡು ಕಣ್ಣೀರ್ಗರೆದು, ಕಾವಿನಲಿ, ನೋವಿನಲಿ,
ನಿನ್ನೆಡೆಗೆ ಸಾಗುತಿಹೆ! ಪ್ರೈಮರೆಪ ಮಧುಭರಿತ
ನಿನ್ನೆದೆಯ ದಳಗಳಲಿ ನನ್ನಾತ್ಮ ಸಂತವಿಸಿ
ನೋವನಳಿಪುದು ಗೆಳತಿ–ಉಳಿದೆಲ್ಲ ಅಳಿದಿರಲಿ!

# ನಾಲ್ಕು ವರ್ಷದ ಕಾಲ

ನಾಲ್ಕು ವರ್ಷದ ಕಾಲ, ನಕ್ಕು ನಲಿದಾಡಿದೆವು
ಕೂಡಿ ಕಲಿತೆವು, ಒಡನೆ ಕುಣಿದಾಡುತ
ಕಂಡ ಕನಸುಗಳೇನು ! ಆಡಿದಾಟಗಳೇನು !
ಕೊನೆಯುಂಟೆ, ಮೊದಲುಂಟೆ, ಕನಸೆ ಜೀವ !

ಉಗಿಯ ನಿಲ್ದಾಣದಲಿ ನೂರಾರು ಎಡೆಯಿಂದ
ಜನರ ಜಂಗುಳಿ ನೆರೆದು ಚಣಗಳೆರಡು
ಉರುಳೆ ಹಾದಿಯ ಹಿಡಿದು ಸಾಗಿದಂತಿದು ಬಾಳು
ಮತ್ತೆ ಕೂಡುವೆವೆಂಬ ಬಯಕೆ ಬರಡು !

ಕಾಲ ಸಾಗುವುದೆಂಬ ಭ್ರಾಂತಿ ಬಡಿದಿತ್ತಾಗ
ಭೀತಿಯಲಿ ಅಪ್ಪಿದೆವು ಬಯಕೆಗಳನು !
ಕಾಲ ಸಾಗುವುದುಂಟೆ ? ಸಾಗುವುದು ನಾವಲ್ತೆ !
ಕಾಲ ಉಳಿಯುವುದಲ್ಲೆ–ನರರೆ ಚರರು !

# ಶೆಲ್ಲಿಗೆ

ನಿನ್ನ ಕೊರಗಲಿ ನೀನು ಹಾಡಿದಾ ಹಾಡುಗಳು
ನನ್ನ ಹೃದಯದೊಳಿಂದು ಕ್ರಾಂತಿಯನು ಹೊತ್ತಿಸಿವೆ.
ಕ್ರಾಂತಿರಸಋಷಿ ಶೆಲ್ಲಿ! ಆದರ್ಶವೊಂದೊಲಿದು
ಜಗದ ರೂಢಿಯನೆತ್ತಿ ಬದಿಗೆಸೆದು ಮುನ್ನಡೆದೆ.
ಅದಕಾಗಿ ಜಗ ನಿನ್ನ ದೂರಿ ದೂರಿಟ್ಟಾಯ್ತು—
ಬಗೆಬಗೆಯ ಚಿಂತೆಗಳ, ನೂರಾರು ಎಡರುಗಳ
ನಿನ್ನ ದಾರಿಯಲೆಸೆದು ಜಗವೆಲ್ಲ ಮುಳ್ಳಾಯ್ತು!
ಅದರ ಮೇಲ್ನೀಬೀಳೆ ಚಿಮ್ಮಿ ಹೊಮ್ಮಿತು ರಕ್ತ!

ಸುಖ ಬಂದರೂ ಬರಲಿ, ದುಃಖ ಬಂದರು ಸರಿಯೆ
ಸುಖದುಃಖಗಳು ಪ್ರೇಮ ಬೆಳಗಿಸುವ ದೀಪಗಳು
ಎನುವ ನಿನ್ನಯ ಕೆಚ್ಚು ಹೃದಯವನು ಬೆಳಗಿಸಿರೆ
ಎನಿತಾದರೂ ಬರಲಿ, ಕಷ್ಟಗಳು ಕನಸುಗಳು!
ಅದಕಾಗಿ ನೀನೆನಗೆ ಬಲು ಮೆಚ್ಚು ಕವಿಗಳಲಿ
ವಿಶ್ವಪ್ರೇಮದ ಕ್ರಾಂತಿ ಕಲಿತೆ ನಾ ನಿನ್ನ ಬಳಿ!

# ದೇವ ನೀನ್ನೈತಂದೆ

ನನ್ನೆದೆಯ ಬಾಗಿಲನು ಮುಚ್ಚಿ ನಿದ್ರಿಸುತಿದ್ದೆ
ಜೀವನದಿ ತಿರುಳಿಲ್ಲವೆಂಬ ಭ್ರಮೆಯೊಳಗೆ
ದೇವ ನೀನ್ನೈತಂದು ಬಾಗಿಲನು ಬಡಿಯೆ ನಾ
ಸಿಡುಕಿನಿಂದಲಿ ಕೇಳ್ದೆ " ಯಾರು ಅದು " ಎಂದು !

ಮೌನದಲಿ ಮತ್ತೊಮ್ಮೆ ಶಬ್ದ ಮಾಡಲು ನೀನು
ನಾನೆದ್ದೆ ಕೋಪದಲಿ ಕೆಂಡದಂತಾಗಿ
" ಯಾರಿವನು-ನಿದ್ರೆಯಲಿ ಭಂಗ ತಂದಿಹ ಧೂರ್ತ "
ಎನುತ ಚಿಂತಿಸಿ ಬಂದು ಬಾಗಿಲನು ತೆರೆದೆ! ೨

ನಿನ್ನ ನೋಡುತಲೆನ್ನ ಕೋಪ ಕಣ್ಣೀರಾಯ್ತು,
ನಿನ್ನ ಮುಗುಳ್ನಗೆ ಮಿಂಚಿ ನನ್ನ ಮನ ಸೆಳೆಯೆ
ಮೌನದಲಿ ಹೃದಯದಲಿ ತಳಮಳದಿ ತಪಿಸಿದೆನು
ನೀನೊಳಗೆ ಬರಬೇಕು ಎಂಬುದೆನ್ನಿಚ್ಛೆ! ೩

ನಸುನಕ್ಕು ಚಣಕಾಲ ಒಳಗೆ ದಿಟ್ಟಿಸಿ ನೋಡಿ
ಮುಂದೆ ಸಾಗಿದೆ ನೀನು ಹೃದಯದೊಲವೆ
ನಿನ್ನ ಪುನರಾಗಮನಕಾಗಿ ಕಾಯುತಲಿರುವೆ
ಎದೆಯ ಬಾಗಿಲ ತೆರೆದು ಹೊಸ್ತಿಲಲಿ ನಿಂದು ! ೪

# ನನ್ನ ಜೀವನ ನದಿಯು ಎದೆ ಮೊರೆತ

ನನ್ನ ಜೀವನ ನದಿಯು ಎದೆ ಮೊರೆತ ಶಾಂತತೆಯ
ಕಡಲಿನಲಿ ಮರೆಯಾಗಿ, ಕಲ್ಪನೆಯ ಕನಸುಗಳು
ವಿಶ್ರಾಂತಿಗಾಗೊರಲಿ ವಿರಹಿಯಾಗಿಹ ಮನವ
ಬಿಸಿ ಮುಳ್ಳುಗಳ ಹಾಗೆ ಒತ್ತೊತ್ತಿ ಕಾಡುವುದು
ನಿಲ್ಲಿಸಿದ ದಿನದಂದು ಈ ಎಡೆಗೆ ಸಾಗುವೆಯ ?
ಹೃದಯದಲಿ ಹಾವಿಟ್ಟು ವಿಷವ ಹುಸಿಯಲಿ ಮರೆಸಿ
ಹೂಹಾರಗಳ ತಂದು ಶವದ ಮುಖ ಸಿಂಗರಿಪ
ಬಂಧುಗಳ ಗುಂಪಿನಲಿ ಸೇರುವೆಯ ಕೊರಗಿನಲಿ !
ನಾವೀರ್ವರೂ ಕಂಡು ಜತೆಯಲಿದ್ದುದು ಎಲ್ಲೊ
ಕೆಲವೆ ದಿನಗಳು ಮಾತ್ರ-ಅದು ಕೂಡ ವಿಷಮತೆಯ
ದ್ವೇಷದಲಿ ಕಳೆದಿದ್ದೆ ! ಮುಂದಕೆಂತೋ ಎಲ್ಲೊ
ಎನುವ ಒಲವಿನ ದುಗುಡ, ನನ್ನ ಹೃದಯದ ಕುದಿತ !
ಅದು ಸಾಗಿ ಹೋದಂದು ಸಾವಶಾಂತಿಯ ದಿನದಿ
ನೀ ಬಂದು ಹೃದಯವನು ಹರಿಸುವೆಯ ಕೊರಗಿನಲಿ ?

# ವೀರಗಲ್ಲು

ನಿಲ್ಲೆಲವೊ ಪಯಣಿಗನೆ ನಿಲ್ಲು! ನಿಲ್ಲು!
ಮುಂದೆಲ್ಲಿ ಸಾಗುತಿಹೆ ನಮ್ಮ ಮರೆತು
ಎಲ್ಲರಂತೆಯೆ ಕಿವುಡೆ ನಿನ್ನ ಮನಸು
—ಕೂಗಿದೆ ವೀರಗಲ್ಲು! ೧

ಒಟ್ಟೈಹರು ಒಂದೆಡೆಗೆ ನಮ್ಮನೆಲ್ಲ
ಉಸಿರಾಡಲೆಡೆಯಿಲ್ಲವೆಮ್ಮ ಬಾಳು!
ಆರು ನಾವೆಂಬುದನೆ ಅರಿಯದಿಂತು
ಬಸವಳಿದು ಬಿದ್ದಿಹೆವು! ೨

ಜೀವ ತೆತ್ತವರೆನಿತೊ ಜನಗಳಾವು
ಜನರ ಬಾಳುವೆಗಾಗಿ ತೆತ್ತು ಬಾಳು
ಮೌನದಲಿ ಉರುಳಿದೆವು-ಜನರು ಬಂದು
ತುಳಿಯುವರು ಸಂತಸದಿ! ೩

ಅಂದೆಮ್ಮ ಬಿಸಿ ರಕುತ ಬಸಿದು ಬಸಿದು
ಬೇಗೆಯಲಿ ಬೆಂದವರ ಬಾಳನುಳಿಸಿ
ಅಳಿದೆವಾವದಕಾಗಿ ಇದುವೆ ಜಗವು
ನಮಗೆ ತೋರಿದ ಕರುಣೆ! ೪

ನಡೆ ಮುಂದೆ, ನಡೆ ಮುಂದೆ, ಪಯಣ ಸಾಗು
ಕಣ್ಣೀರಿನಲಿ ನೆಲವ ತೊಯಿಸಬೇಡ
ಇಂದೆ ಮೊದಲಿಗೆ ಜಗದಿ ಎದೆಯ ನೀರು
ನಮ್ಮ ತಲೆ ತೊಳೆದಿಹುದು! ೫

# ಗಾಂಧೀಜಿಗೆ

ನೂರಐವತ್ತೈದು ವರುಷಗಳು ದಾಸ್ಯದಲಿ
ಬಿದ್ದು ಭಾರತ ತನ್ನ ಆತ್ಮವನೆ ಮರೆತಿಹುದು
ತನ್ನ ಶಕ್ತಿಯಲಿಂದು ಇನಿತಾದರೂ ಅದಕೆ
ನಂಬುಗೆಯು ಉಳಿದಿಲ್ಲ !—ಕೂಪದಲಿ ಉರುಳಿಹುದು !
ಮತ್ತೆ ನಮ್ಮಾನಾಡು ಕತ್ತಲಿಂ ಹೊರಗೆದ್ದು
ಬೆಳಕಿನಲಿ—ಸ್ವಾತಂತ್ರ್ಯ ಜ್ಯೋತಿಯಲಿ ನಲಿಯುವುದು
ಉಂಟೇನು ಎಂದೆನುವ ಶಂಕೆಗಳು ಎದ್ದೆದ್ದು
ಮನವ ಹಿಂಡುತಲಿಹುವು—ಹೃದಯ ಸಿಡಿಯುತಲಿಹುದು!

ಹೊರಗೆನಿತು ಕುತ್ತಗಳು ಬಂದರೂ ಬರಬಹುದು
ಆತ್ಮವನು ಕತ್ತಲೆಯು ಮುಸುಕು ಮುತ್ತದ ಹಾಗೆ
ತನ್ನ ತೇಜೋಬಲವ ಹೆಚ್ಚಿಸುತ ಮುನ್ನಡೆದು
ತನ್ನಲೇ ತಾ ನಂಬಿ ನಿಜವನರಿಯುವ ರೀತಿ
ಬೋಧಿಸಿದ ವಿಶ್ವಗುರು ಗಾಂಧೀಜಿ ನಿನ್ನಡಿಗೆ
ಕನ್ನಡದ ಕೂಸೊಂದು ತರುತಿಹುದು ಕಿರುಪ್ರಣತಿ !

# ಕಾಲನಾಗಗಳೊಡಲು ಜಗದ ಮನ

ಕಾಲನಾಗಗಳೊಡಲು ಜಗದ ಮನ ಎಂಬುದನು
ಅರಿತುಅರಿತೂ ಮರೆತು ಬಾಳಬೀದಿಗಳಲ್ಲಿ
ಒಲವ ಭಿಕ್ಷೆಯ ಬೇಡಿ ಬಂದಿಹೆನು ಇಲ್ಲಾನು
ಹೃದಯ ಬೇಡಿದ ನೇಹ ದೊರಕುವುದು ನಿನ್ನಲ್ಲಿ
ಎನುವ ಭರವಸೆಗೂಡಿ. ಮರುಳುಗೊಳಿಸುವ ಮಾಟ
ಹುದುಗಿಸುತ ಒಳಗೆ ವಿಷ, ಹೊರಗೆ ಮಾಯೆಯ ಬೀರಿ
ತನ್ತನಕೆ ಜಗವನೇ ಬಲಿಕೊಡುವ ಗೋಳಾಟ
ಅನುಭವಿಸಿ ಈಗಿಂದು ನಿನ್ನೆದೆಯ ಬಳಿಸಾರಿ
ನಿಜನೇಹ ಬೇಡುತಿಹೆ—ಅದನೀನು ಅರಿತಿಲ್ಲ !
ಅರಿತರೂ ಅರಿತಿಲ್ಲ !—ಬೇಡಿದುದು ಭಿಕ್ಷುಕಗೆ
ದೊರೆಯುಲಹುದೇನಿಲ್ಲಿ ? ಬಾಳಿನಲಿ ಉಳಿದೆಲ್ಲ
ನಡೆದಂತೆ ನೀನಾದೆ !—ಆದಕೆ ನಿನ್ನೆದೆಯ ಬಗೆ
ಅರಿತು ನಾ ಮೌನದಲಿ ಕುಳಿತಿಲ್ಲಿ ಮರುಗುತಿಹೆ
ನೀನಲ್ಲಿ ಹಗೆತನದ ಮಾಯೆಯಲಿ ನಗುತಲಿಹೆ !

# ಓಡಿ ಬಾ

ಕ್ರಾಂತಿ ಕಂದ
ನಿನ್ನ ಅಂದ
ಕಾಣಲೆಂದ
ಕವಿಗೆ ಬಂಧ
ಮುಕ್ತಿ ನೀಡು ಬಾ
ನಗೆಗಡಲಲಿ ನಲಿದು ಬಾ
ಸುಳಿಯೊಡಲಲಿ ಸುಳಿದು ಬಾ
ಮುಗಿಲಲೆಯಲಿ ಮುಳಿದು ಬಾ-ಓಡಿ ಬಾ ||
ಅಂಧಕಾರದಲ್ಲಿ ಬಂದು
ಮುಗಿಲಮುಡಿಲಿನಲ್ಲಿ ನಿಂದು
ತಂಬೆಳಕನು ತಂದು ತಂದು
ಎಳೆಯೆಳೆಯಲಿ ಹರಡುವಂತೆ
ಬಾನಿನಲ್ಲಿ ಹೊಳೆವಸಂತೆ
ಬಾ....
ಜೀವನದಿಂದುಕ್ಕಿ ಉಕ್ಕಿ
ಸಾವಕಡಲ ಎಣೆಯ ಮಿಕ್ಕಿ
ನೋವನೆಲ್ಲ ಸದೆಯುನಿಕ್ಕಿ
ಬಾ
ಜೀವನದಲಿ ಸಾವಿನಲ್ಲಿ
ಕನಸಿನಲ್ಲಿ ನನಸಿನಲ್ಲಿ
ಸಪ್ತಜಗಗಳೊಡಲಿನಲ್ಲಿ

ಹರಿಯುತಿರುವ ಹೊನಲೆ ಬಾ
ಕಂದ ಕರೆಯುತಿರುವೆ ಬಾ

ಗುಡುಗುಗು ಗುಡುಗಿ ಸಿಡಿಲು ಸಿಡಿದು
ವಿಶ್ವಕರ್ಮನೆದೆಯನೊಡೆದು
ಭೂಗರ್ಭದ ಶಾಂತಿ ಕಡೆದು
ಜೀವತಂತಿ ಮಿಡಿದು ಮಿಡಿದು
ಹೊಸ ಜಗವನು ಸೃಜಿಸು ಬಾ
ಓ ಓಡಿಬಾ....

ಕಾವಿಲ್ಲದೆ ಜೀವನೆಲ್ಲಿ
ಕ್ರಾಂತಿ ಕಾವೆ ಬಾ
ನೋವಿಲ್ಲದೆ ಕಾವುದೆಲ್ಲಿ
ನೋವ ನುಡಿಯೆ ಬಾ
ಅಳಿವಿಲ್ಲದೆ ಉಳಿವು ಎಲ್ಲಿ
ಅಳಿವಿನುಳುವೆ ಬಾ ...
ಜೀವ ಸಂಗ್ರಾಮದಲ್ಲಿ
ಬಾಳಿನಿರುಳ ರಂಗದಲ್ಲಿ
ಸುಳಿಗಾಳಿಯ ಮಡುವಿನಲ್ಲಿ
ಸುಳಿಸುಳಿಯುತ ಬಾ
ಸುಖಸೃಜಿಸುವ ಬಾ ...
ಬಾಳಬಯಲ ಬಳಸಿ ಸುತ್ತ
ಅಳುತಿರುವ ಗೋಳನತ್ತ
ಬೀಳುಗೊಳಿಸಿ ಅತ್ತ ಇತ್ತ
ನಗೆ ಹೊನಲನು ಹರಡು ಬಾ

ಸುಖದ ಸುಗ್ಗಿ
ಬೆಳೆದು ಆಳೆದು
ಜೀವ ಹುಗ್ಗಿ
ಆಳೆದು ಅಳೆದು
ಎಲ್ಲ ಚೆಲ್ಲು ಬಾ
ಓ!
ಕ್ರಾಂತಿ ಕಂದ
ನಿನ್ನ ಅಂದ
ಕಾಣ ಲೆಂದ
ಕವಿಗೆ ಬಂಧ
ಮುಕ್ತಿ ನೀಡು ಬಾ

# ಬಾರ್‍ೈದೇವ

ಕಲ್ಲನು ಕರಗಿಸಿ ಕರುಳಿನ ಕೂಗು
ದಿಗಂತ ಒಡೆಯುತಿದೆ
ವಿಶ್ವವ ಮುತ್ತಿದ ನೆತ್ತರ ಹೊಳೆಯು
ಬಾಳನೆ ಮೆಟ್ಟುತಿದೆ !

ನೆಲದಲಿ ಹೋರುತ ಕಾಳನು ಕೆತ್ತಿ
ರಕ್ತವ ಬೆವರಿನೊಲು
ಹರಿಸುವ ದಲಿತನ ಹೊಟ್ಟೆಯು ಕಂದಿ
ದೇವರ ಶಪಿಸುವುದು.

" ಬಾರ್‍ೈ ದೇವನೆ, ಬಾರ್‍ೈ ಹೊರಗೆ
ಜಗದುಳಿಕೆಯ ನೋಡು
ದುಡಿವವ ಮುಡಿದಿರೆ ಪಡೆವವ ಬೇರೆ
ಎಂತಹ ರೀತಿಯಿದು ? "

ದೇವರು ಗುಡಿಯಲಿ ಕಲ್ಲಿನಮುದ್ದೆ
ಏನನು ಮಾಡುವನು !
ತಾನೇ ನಡೆಸಿದ ವಕ್ರತೆ ಮರೆಯಲು
ಸೆರೆಯಾಗಲ್ಲಿಹನು !

# ಸಿಂಕ್ಲೇರನಿಗೆ *

ಹಸಿದ ಹೊಟ್ಟೆಯ ಹೇರ ಹೊರಲಾರದಿಹ ಜನರ
ಕಾಸಿನಾಸೆಯ ತೋರಿ ಹೇಸಿಗೆಯ ನರಕದಲಿ
ದೂಡಿದುಡಿಸುವ ದುಡ್ಡಿನಪ್ಪಗಳ ವಿಶ್ವವನು,
ನಾಗರಿಕ ಜೀವನದ ಮೇಲ್ಮುಸುಕ ಮರೆಯಲ್ಲಿ
ಬಚ್ಚಿಟ್ಟ ಬ್ರಹ್ಮಾಂಡ ಬಯಲು ಮಾಡಿದ ಬ್ರಹ್ಮ     ೫
ಸಿಂಕ್ಲೇರ ಅಪ್ಟನನೆ ನಿನಗೆ ಜಗ ಚಿರಋಣಿಯು !
ಬಾಳ ಕಗ್ಗಾಡಿನಲಿ ಸಿಕ್ಕಿ ಸೊರಗಿದ ದೀನ
ಕೂಲಿಗಾರನ ಜೀವ—ನೋವು ಕಾವಿನ ಬಾಳು
ಕಾಸುಗಾರನ ಕೈಯ ರಾಕ್ಷಸೀ ಹಿಡಿತದಲಿ
ದಬ್ಬಾಳಿಕೆಯ ಕ್ರೂರಯಂತ್ರದಲಿ ನಶಿಸುತಲಿ     ೧೦
ಅಂಧಕಾರದಿ ಬರಿಯ ಧೂಳಾಗಿ ಬೀಳುವುದ
ತೋರಿಸಿದೆ. ದೂರದಿಂ ನೋಡಿದೊಡೆ ಕಾರ್ಖಾನೆ
ಬಾಳು ಬಲು ಬಲು ಚಂದ, ಕಾಸ ಕೂಡಿಸಬಹುದು
ಎಂಬ ಭ್ರಮೆ ಮುಸುಕುವುದು, ಬೆಳಕಿಲ್ಲೆ ಇಹುದೆಂಬ
ಹಿಗ್ಗಿನಲಿ ಬಂದೊಡನೆ, ಬಯಕೆಗಳು ಬಯಲಾಗಿ     ೧೫
ಎದೆಯೊಡೆದು ನೀರಾಗಿ-ಕತ್ತಲಲಿ ಕುಗ್ಗುವುದು!
ಜೀವ ಮೊದಲಿಂ ತುದಿಗೆ ಮೋಸ, ಮೋಸದಸಂತೆ !
ಕಸವನೇ ರಸವೆಂದು ಮರುಳುಗೊಳಿಸುವ ಜಾಲ !
ಅಮೆರಿಕದ ಜೀವವಿದು ! ಒಳಗನರಿಯದೆ ಬರಿಯ
ಹೊಳೆವ ಹೊರಗನೆ ಕಂಡು ಮುಗ್ಧರಾಗುತ ಓಡಿ     ೨೦

---

* The "Jungle" ಕಾದಂಬರಿಯನ್ನು ಓದಿದಮೇಲೆ ಬರೆದುದು.

ಸಾರಿ ಬಂದವರೆನಿತು ಜಾರಿಬಿದ್ದರು ಬಲೆಗೆ !
ಕೂಲಿಗಾರನ ಕಷ್ಟ ಬಣ್ಣನೆಯ ಬಣ್ಣಕ್ಕೆ
ನಿಲುಕದಿದೆ. ಕಲ್ಲೂಡ ಕರಗುವುದು ಕೇಳುತದನು !
ಎಲ್ಲವನು ವರ್ಜಿಸುತ, ಕಷ್ಟಗಳ ಬೆಟ್ಟಗಳ
ಬೆನ್ನ ಮೇಲ್ಹೊರುವುದಕೆ ಸುಖವಿರಹಿ ಬಂದಿಹನು ! ೨೫
ಆವುದನು ಅಮೃತವೆಂದೆಣಿಸಿ ಬಂದಿರ್ದನದೆ
ಸರ್ಪವಿಷ ! ಜೀವನವ-ರಸವನ್ನು-ಕಾವನ್ನು
ಮೆಲ್ಲಮೆಲ್ಲನೆ ಹಿಂಡಿ ಹಿಪ್ಪೆಯಾಗಿಪ ಯಂತ್ರ !
ಕಂಪಸೂಸುವ ಹೂವಹಾರವೆಂದಿರ್ದುದದು
ಫೂತ್ಕಾರ ಮಾಡುತಿಹ ಉರಿವ ಹಾವಿನ ಹೆಡೆಯು ! ೩೦
ಬಂಡವಾಳದ ಬಾಳು ! ಮೊದಲಿನಿಂ ಕೊನೆವರೆಗು
—ಕಾರ್ಖಾನೆ, ಸಹಕಾರ ಸಂಘಗಳು, ಸರ್ಕಾರ—
ಎಲ್ಲ ಮೋಸದ ಬೀಡು ! ಮೋಸವೇ ಉಸಿರವಕೆ !
ಮೇಲ್ಮಾತ್ರ ಬಲು ಚೆನ್ನ ! ಮನಸೆಳೆವ ಮುಗ್ಧಬಗೆ !
ದೂರದಿಂ ನೋಡುತಲೆ ಹೃದಯ ಸಾರುವುದಲ್ಲಿ ! ೩೫
ಬಳಿಗೆ ಸಾರುತಲೊಮ್ಮೆ ಬಿದ್ದರಾಯಿತು ಬಲೆಗೆ,
ಹೊಂಡದಿಂ ಹೊರಬೀಳ್ವ ಆಸೆ ಬರಿ ಹುಡಿಗನಸು !
ಸುತ್ತೆಲ್ಲ ಹಸುರುವನ-ಒಳಗೆ ಗಾಢಾಂಧತೆಯು
ಮುಸುಕಿರುವ ಹೆಗ್ಗವಿಯು ! —ಜೀವ ಬರಿ ಕಗ್ಗಾಡು !
ಕಗ್ಗಾಡು ! ಗಾಢಾಂಧ ! ಕರೆದೊಯ್ಯುವವರಿಲ್ಲ ! ೪೦
ನೂರಾರು ಕವಲುಗಳು-ಎಲ್ಲ ಒಂದೆಡೆಗೇ !
ದಾರಿಯರಿಯದು, ವೇಳೆಯರಿಯದೆಯೆ ಮುನ್ನಡೆದು,
ಕಾದು ಕುಳಿತಿಹ ಕ್ರೂರ ಧನಪ್ರೇತಗಳ ಬಾಯ್ಗೆ

ತುತ್ತಾಗಿ, ತೊತ್ತಾಗಿ, ಸಾಯುವುದು! ಕೂಲಿಗಳ
ಜೀವನಕೆ ಬೆಳಕಿಲ್ಲ! ಗಾಢಾಂಧತೆಯು ಬೀಡು! ೪೫
ಅಂತಾದರಿದರಿಂದ ಕೂಲಿಗಾರಗೆ ಮುಕ್ತಿ
ದೊರೆಯದೇ? ಕನಸುಗಳ ಬಯಕೆಗಳ ಬಸಿರಿನಲಿ
ಬಡಿದು ಕೊಲ್ಲುವುದೇನು? ಬೇರೇನು ಗತಿಯಿಲ್ಲ!
ಬಂಡವಾಳದ ಹಿಡಿತ ಬಲು ಭದ್ರ-ಜಗವೆಲ್ಲ
ಕಾಸಿಗೊಡೆಯರ ಕೈಲಿ ನಶಿಸಿಹೋಗುತಲಿಹುದು! ೫೦
ದುಡ್ಡಿನಲ್ಲಿದೆ ಜೀವ! ದುಡ್ಡಿನಿಂದಲೆ ಜೀವ!
ಉಳಿದಿಹುದು ಏನೆಮಗೆ? ಕೂಲಿಗಾರರಿಗೇನು?
ದುಡಿದು ದುಡಿದೂ ಇಂತೆ ಮಡಿಯುವುದೆ ಫಲವೇನು?
ಕಗ್ಗಾಡಿನಂಧತೆಯು ಬೆಳಗಿ ದಾರಿಯತೋರ್ವ
ಕಿರಣವೆಮಗಿಲ್ಲವೇ?-ಆಸೆಯಿದೆ! ಧೈರ್ಯವಿದೆ! ೫೫
ಬಂಡವಲದಂಗಾಂಗ ಛಿದ್ರಛಿದ್ರವ ಮಾಡಿ
ಕಿತ್ತೊಗೆದು, ಕೂಲಿಗಳ ಜೀವ ಸವಿಯಾಗಿಪುದು
ಕಗ್ಗಾಡ ಬೆಳಗಿಸುವ ಕಿರಣ ಹೊರಹೊಮ್ಮುತಿದೆ
ಕೂಲಿಗಾರರ ಶಕ್ತಿ! ಸಾಮ್ಯವಾದದ ಕತ್ತಿ
ಸಾಮ್ಯವಾದವದೊಂದೆ ಶತ್ರುವಿಗೆ ಹಿರಿಮದ್ದು! ೬೦
ಸಾಮ್ಯವಾದವದೊಂದೆ ಶತ್ರುವಿಗೆ ಸಿಡಿಮದ್ದು!
"ಎಮ್ಮದಾಯ್ತು ಚಿಕಾಗೊ! ಎಮ್ಮದಾಯ್ತು ಚಿಕಾಗೊ!"
ಎಂಬ ಕೊನೆಯಾಕೂಗು ಬಂಡವಲದೆದೆ ಒಡೆದು
ದಿಕ್ಕುದಿಕ್ಕುಗಳಲ್ಲಿ ಮೊಳಗುವುದು – ಗುಡುಗುವುದು!
"ಎಮ್ಮದಾಯ್ತು ಚಿಕಾಗೊ!" ಕೂಗು ಬದಲಿಸುತಿಂದು ೬೫
ಕೂಲಿಗಾರರ ಕೊರಳಿನಿಂದಿಂತು ಹೊರಡುತಿದೆ!
"ವಿಶ್ವವೇ ನಮ್ಮದಿದೆ, ನಮ್ಮ ಹಕ್ಕಿದು ವಿಶ್ವ!
ವಿಶ್ವ ನಮ್ಮದೆ ಅಹುದು! ನಮ್ಮದಾಯ್ತೊ ವಿಶ್ವ!" ೬೮

# ಆದರ ಮಾತಿನ್ನೇಕೆ

ಆದರ ಮಾತಿನ್ನೇಕೆ ? ಆದುದಾಗಿಯೆ ಹೋಯ್ತು !
ಬಯಸಿದುದು ದೊರೆತಿಲ್ಲ—ದೊರೆತಿಹುದು ಬೇಕಿಲ್ಲ !
ಆಸೆಗಳು ಮೋಸಗಳು—ಬಯಕೆ ಬಾಡಿಯೆಹೋಯ್ತು !
ಇದುವೆ ಜೀವನದಾಟ—ಮಂಜು ನಂಜಿನದೆಲ್ಲ !
ನಾಬೆಳೆಸಿ, ನಿನ್ನೊಲವನೊಲಿಸಲಿಕೆ ದಿನದಿನವು
ಹೂಗಳನು ಪೇರಿಸಿದೆ ರಾಸಿಯಲಿ !—ಆದರೆದೆಯ
ಕಂಪಿನಲಿ ಹುಚ್ಚಾಗಿ ಹಾಡುತಿದೆ ಎನ್ನೆದೆಯು
'ನಿನಗಾಗಿ ನನ್ನೆಲ್ಲ'— ಎನ್ನೊಲವ ಕೊಳ್ಳೆನುತ !
ನೀ ಬಯಸಿದುದೆ ಬೇರೆ! ನನ್ನ ಸಾವನು ಬಯಸಿ
ಹೂಗಳನು ಹೊರಗೆಸೆದೆ—ಅದನಿಂದು ದಾರಿಗರು
ಎತ್ತಿ ಮುಡಿಯುತಲಿಹರು ! ನಿನ್ನ ದ್ವೇಷಾಗ್ನಿಯಲಿ
ಬಾಡಿದಾ ಹೂವುಗಳು ಒಲವಿನಲಿ ಅರಳಿಹುವು !
ಇದುವೆ ಬಾಳಿನ ಹುಚ್ಚು—ಇದಕೆ ಮದ್ದೇ ಇಲ್ಲ !
ಅದಕಾಗಿಯೇ ಇಂದು ಮರೆಯುತಿಹೆ ಅದನೆಲ್ಲ !

# ನಿಜಬುದ್ಧ

ಹಿಂದೊಮ್ಮೆ ಬುದ್ಧ ತನ್ನೊಲವ ಶಿಷ್ಯನ ಕೂಡ
ಮಾತನಾಡುತಲಿರಲು ಸೃಷ್ಟಿಸ್ಥಿತಿಲಯ ವಿಷಯ,
ಆನಂದ ಪ್ರಶ್ನಿಸಿದ " ಗುರುದೇವ, ಹೃದಯದಲಿ
ತೊಡಕುತಿದೆ-ಸಂದೇಹ-ಕೇಳುವೊಡೆ-ಹೇಳುವೆನು ! "
ಬುದ್ಧದೇವನು ಆಗ ಚಂದ್ರಮನ ಎಳೆನಗುವ ೫
ನಕ್ಕು ಪೇಳಿದನಿಂತು-" ಆನಂದ, ಅಂತಹುದು
ಸಂದೇಹವೇನಿಹುದು ?–ಮನವ ಮುರಿವಂತಹುದು!
ಅರಿತಿದ್ದರದಕಾನು ಉತ್ತರವ ಹೇಳುವೆನು "
" ಗುರುದೇವ ! ಜೀವನದಿ ಎಲ್ಲರೊಡನಾಡುತಲಿ
ಕಾಮಕ್ರೋಧದ ಕ್ರೂರ ಅಲೆಗಳಪ್ಪಳಿಸಿದರು ೧೦
ಕಲ್ಬಂಡೆಯಂತಿರುವ ಯೋಗವೇ ಮೇಲಹುದೊ ?
ಮೇಣ್, ಜಗಕೆ ದೂರಾಗಿ ಜ್ಞಾನಪಡೆವುದು ಮೇಲೊ ? "
" ಆನಂದ, ಸಂದೇಹ ತಿಳುಹಿದುದೆ ಮೇಲಾಯ್ತು !
ನಾನು ಜಗವನೆ ತೊರೆದು ದೂರ ಕಾಡನು ಸೇರಿ
ಬುದ್ಧನಾದುದು ನಿನಗೆ ಅರಿತಿಹುದು ಎನಗಲ್ಲಿ, ೧೫
ಕಾನನದಿ ಮಾಯೆಗಳು ಬಂಧನಗಳಿರಲಿಲ್ಲ !
ರಾಹುಲ ಯಶೋಧರರ ಮಾಯೆಯನು ಒಡೆಯಲಿಕೆ
ಕಾಡಿಗೋಡಿದೆ ನಾನು !—ಅದು ಹಿರಿಮೆಯೇನಲ್ಲ !
ಪತ್ನಿ ಪುತ್ರರರ ಕೂಡ ನಿಂತು ತನ್ನನು ಗೆಲುವ
ಯೋಗವೇ ಮೇಲಹುದು ! ಬುದ್ಧನಾದರು ಮತ್ತೆ ೨೦
ಅರಿತುದನು ಬಿತ್ತಲಿಕೆ ಜನತೆಯೇನೆಲನೆಮಗೆ !
ಜನತೆಯೊಡಲಲಿ ಹುಟ್ಟಿ, ಜನತೆ ಮಡಿಲಲಿ ಬೆಳೆದು,

ಜನತೆಯೆಡೆಯೇ ಉಳಿದು, ಜನತೆಯಡಿ ಮುಂದೊಯ್ವ
ಜ್ಞಾನ ಕರ್ಮಿಯು ಬುದ್ಧ!—ಮುಂದೆ ಬರುವವನವನು!
ಹಗಲು ಹುಟ್ಟುವ ಮುನ್ನ ಅರುಣನಿಣುಕುವ ಹಾಗೆ ೨೫
ಮುಂದೆ ಜನಿಸುವ ಅವನ ಆಗಮನ ಸೂಚಿಸಲು
ನಾಬಂದೆ! ಆನಂದ—ಈಗ ನಿನಗರಿವಾಯ್ತೆ?
ಜಗದ ನಿಜವನು ಅರಿತ ನಿಜಬುದ್ಧ ಬರುತಿಹನು!
ಜಗವ ನಿಜದಲಿ ನಡೆಪ ಆನಂದ ನನಗಿಲ್ಲ—
ಆತನಿಗೆ ಮೀಸಲದು!" ಆನಂದ ನಡುವಿನಲಿ ೩೦
ಬಾಯಿಟ್ಟು ಪ್ರಶ್ನಿಸಿದ, "ಗುರುದೇವ, ಆತನನು
ವರ್ಣಿಪಿರ?—ಎಂತಿರುವ ಆ ಬುದ್ಧ-ನಿಜಬುದ್ಧ?
ಜಗದ ನಡೆನುಡಿಬೆರೆತ, ಜಗದ ಸತ್ಯವನರಿತ
ಜಗದ ಕೂಸಾಬುದ್ಧ ಎಲ್ಲಿ ಜನಿಸಿಹನವನು?"
ಬುದ್ಧ ನಸುನಕ್ಕಿಂತು ಪೇಳಿದನು ಉತ್ತರವ— ೩೫
"ನಡುವಿಂದ ಮೊಳಕಾಲವರೆಗಿಳಿವ ಬಿಳಿವಸ್ತ್ರ
ತನ್ನ ಕೈಯಿಂ ತಾನೆ ನೂತುನೇದುದು ಖಾದಿ!
ಮೇಲ್ಹೊದಿಕೆ ಮತ್ತೊಂದು— ಬಿಳಿಯ ಖಾದಿಯ ಚೌಕ
ವಿಶ್ವದಿಗ್ವಿಜಯಕ್ಕೆ ಹೊರಟ ಸನ್ಯಾಸಿಯುವ,
ಕೈಯಲ್ಲಿ ದಂಡವಿದೆ— ಮುಖಬತ್ತಿ ಬಾಡಿಹುದು ४೦
ಯೌವನದ ತೇಜವಿದೆ-ಬ್ರಹ್ಮಚರ್ಯದ ತೇಜ!
ಮುದಿಯನು ಮಾತೆಯೊಲು ಕಾಣವವನಾ ತೇಜ!
ಹೃದಯದಲಿ ಹಿರಿಕಿಚ್ಚು—ಸ್ವಾತಂತ್ರ್ಯದಾ ಕಿಚ್ಚು
ಅದೊ ಆತ ಬರುತಲಿಹ ಈ ಎಡೆಗೆ ನೋಡಲ್ಲಿ
ಭಾರತಿಯ ಹಿರಿಯಮಗ-ಕಿರಿಯಮಕ್ಕಳು ನೋಡು ४೫

ಎನಿತು ಜನ ದಂಡಾಗಿ ಹಿಂದೆ ಸಾಗುತಲಿಹರು—
ಬುದ್ಧನವ !- ನಿಜಬುದ್ಧ ! ನಾನವನ ಜನ್ಮವನು
ಸೂಚಿಸಲು ಬಂದಿದ್ದ ಮುಂಜಾನೆ ! - ಆನಂದ ! ”
—ಅಷ್ಟರಲೆ ಕನಸೊಡೆದು ಎಚ್ಚೆತ್ತು ನೋಡಿದೆನು
ಸೆರೆಮನೆಯ ಹೊರಬದಿಗೆ ಕಾವಲಿನ ಪೋಲೀಸ       ೫೦
ನಡೆದ ಬೂಟ್ಸಿನ ಸದ್ದು ರಾತ್ರಿಯಾ ಕಡುಮೌನ
ಭೇದಿಸುತ ಬರುತಿತ್ತು—ಸುಂದರ ದಿಗಂತದಲಿ
ನಕ್ಷತ್ರನೂರ್ಲಕ್ಷ ಸ್ವಾತಂತ್ರ್ಯಸಿರಿಯಲ್ಲಿ
ನಕ್ಕುನಲಿಯುತಲಿರಲು, ಸೆರೆಮನೆಯ ಒಳಬದಿಯ
ಗಾಳಿ ಸುಂಯ್ಗುಡುತಿತ್ತು ! ಕಂಗಳಲಿ ನೀರೂರಿ       ೫೫
ಗೋಡೆಯಲಿ ಮಸಿಯಿಂದ ನಾಬರೆದ ಚಿತ್ರದೆಡೆ
ಕಣ್ತಿರುವಿ ಕೈಮುಗಿದೆ ಗಾಂಧಿಗೆ ಮಹಾತ್ಮನಿಗೆ !
—“ ನಿಜಬುದ್ಧ ! ಭಾರತಿಯ ಹಿರಿಮಗ-ನಮಗೆಲ್ಲ
ಆತ್ಮ ಸ್ವಾತಂತ್ರ್ಯವನು ಸಾಧಿಸುವ ಮಂತ್ರವನು
ಬೋಧಿಸಿದ ನಿಜಗುರುವೆ !—ನಿನಗೆ ಚಿರಜಯವಕ್ಕೆ ! ”  ೬೦

# ಬಾಡದ ಹೂವು

ಅರಳುತಿಹ ಮೊಗ್ಗೊಂದು ಅರಳದೆಯೆ ಉರುಳಿದುದು
ಕಣ್ಣೀರಸಿಡುತಿಹಳು ಹಡೆದ ತಾಯಿ
ಕಾಲನಾಟವೊ ಇಲ್ಲ ಕರುಬು ಕೂರಸಿ ಕೃತಿಯೊ
ಎಳೆಹೂವಿನಾತ್ಮವನು ಅಳಿಸಿದುದು ಇಂತು ?

ಸುತ್ತ ಮುತ್ತಿಹ ಕ್ರೌರ್ಯಕಾನನದ ದಟ್ಟದಲಿ
ಶತ್ರುಗಳು ಮೆಟ್ಟುತಿರಲದನು ಕೆಳಗೆ
ಎತ್ತಿಮೇಲಕೆ ಮೊಗವ ಸುತ್ತ ಕಂಪನು ಬೀರಿ
ಜಗವ ತಣಿಯಿಸುವಾಸೆ ತುಂಬಿಬಂದಿರಲು

ನೆತ್ತಿ ಮೇಲೆತ್ತಿತ್ತು. ಮೊಗ್ಗು ಅರಳುತಲಿತ್ತು,
ಹಿಗ್ಗಿನಲಿ ಸುತ್ತೆಲ್ಲ ನೋಡುತಿತ್ತು. ೧೦
ಎನಿತೆನಿತೊ ದುಗುಡಗಳ ನಡುವೆ ಸುಖವನು ತರುವೆ
ಜಗಕೆ ಶಾಂತಿಯನೀವೆ ಎಂದು ಕುಣಿದಿತ್ತು.

ಮೃದುತೆ ದಳಗಳು ತೆರೆದು ಹೃದಯದಲಿ ಹುದುಗಿರುವ
ಸೌಂದರ್ಯ ಕಂಪುಗಳ ರಾಸಿ ತೋರಿ
ಕಿಲಕಿಲನೆ ನಗುನಗುತ ವಿಶ್ವಕಾನಂದವನು
ಒಯ್ಯಲಿಕೆ ಪವನನಿಗೆ ವೀಳ್ಯ ಕೊಡುತಿಹುವು.

ಮನಸಿನಲಿ ಮೂಡಿದ್ದ ಕನಸ ನನಸಾಗಿಸಲು
ಅನುದಿನವು ಯತ್ನಿಸಿರೆ—ಮೃತ್ಯುಬಂತು !
ಕನಸು ಕನಲಿಯೆಹೋಯ್ತು, ನನಸು ನಲುಗಿಯೆಹೋಯ್ತು
ಕಲಕಿಹೋಯಿತು ಶಾಂತಕೊಳದ ಪನ್ನೀರು ! ೨೦

ಅಷ್ಟರಲೆ ಬಂದೆರಗಿ ಮೃತ್ಯು ಮುತ್ತಿತು ಆದನು
ಸೊಕ್ಕಿನಲಿ ಕೊಂಡೊಯ್ದು ಹಿಸುಕಿ ಹಿಂಡೆ
ಉಪವನದ ಬಳ್ಳಿಗಳು ಕೊರಗಿನಲಿ ದೂಡಿದುವು
ಕರುಣೆಯಿಲ್ಲವೆ ಆದಕೆ ? ಅಂದವಿಧಿಯಾಳು !

"ಎಮ್ಮೊಡನೆ ಒಡನಾಡಿ ಕುಣಿದಾಡಿ ಕೆಲೆದಾಡಿ
ಹರಸಿದುದು ಹೊನಲಾಗಿ ಹೊಸತು ಕಂಪು
ನಿನಗೇನನೆಸಗಿತದು ? ಎಳೆಯು ಕಂದನನಿಂತು
ಮಸಣಕೊಯ್ವುದು ನಿನಗೆ ತರವಹುದೆ ವಿಧಿಯೆ ?"

ಅವನಿಗಾಗಳುತಿರುವೆ ! ಎನ್ನಾತ್ಮದಾನಂದ
ಮಡಿದವನ ಮುಡಿಯೊಡನೆ ಜಡವಾಯಿತು ! ೩೦
ವಿಶ್ವವನು ಕುಣಿಸಿದ್ದ ವಿಶ್ವಪ್ರೇಮಿಯು ಆತ
ಎನ್ನೆದೆಯ ಬೆಳಕಿಂದು ನಂದಿತವನೊಡನೆ !

ಅವನ ನುಡಿ ಮೊಳಗಿತ್ತು ಮೋಡದಲಿ. ಮಿಂಚಿತ್ತು
ಮುಗುದೆಯರ ಮುಗುಳಿನಲಿ. ಕಾಡು ನಾಡು
ಅವನ ವಾಣಿಯ ಗೀತ ಕೇಳಿ ಕುಣಿಯುತಲಿತ್ತು
ಇಂದೆಲ್ಲ ಮೌನದಲಿ ಮರುಗುತಿವೆ ಅವಗೆ !

ನೋಡಲ್ಲಿ ಬಾಲರವಿ ಕೆಂಪುಕಾವಿಯನುಟ್ಟು
ಸಂನ್ಯಾಸಕೊಂಡಿಹನು, ಅವನ ಹೃದಯ
ರಕ್ತ ಕುದಿಯುತಲಿಹುದು. ಸತ್ತ ತನ್ನಾತ್ಮಪ್ರಿಯ
ಪುತ್ರನೆಂದವನ ಮುಖ ಮಂಜು ಮುಸುಕಿಹುದು !೪೦

ಕೊಳಲಿನೊಳದನಿಯಿಲ್ಲ. ಬರಿಕೊಳವೆಯಾಗಿಹುದು !
ಅಳಲಿನಲಿ ಅದರುಸಿರು ಉಡುಗಿಹೋಯ್ತು !
ತನಗುಸಿರ ಕೂಡಿಸುತ ಆತ್ಮದಾನಂದವನು
ಹೊರಚೆಲ್ದ ಕವಿಗಾಗಿ ಕೊರಗಿ ಕಾದಿಹುದು.

" ವಿಶ್ವ ಬಹುವಿಸ್ತಾರ, ಆದರೆನಗೆಡೆಯಿಲ್ಲ !
ಆರಿಗೊರೆಯಲಿ ಎನ್ನ ಎದೆಯ ದುಗುಡ ?
ನೋವಿನಲಿ ಕುಲುಮೆಯಲಿ ಬೇಯುತಿದೆ ಎನ್ನೆದೆಯು
ಬಂಜೆಯಾದೆನೆ ಮತ್ತೆ " ಎನ್ನುತಿದೆ ನಾಡು.

" ಆತನಿರ್ದಾಗವನ ಮಾತುಗಳ ಮಾಧುರ್ಯ
ಪೂತಗೊಳಿಸುತಲಿತ್ತು ವಿಶ್ವದೆದೆಯ. ೫೦
ಆತನಿಲ್ಲದೆ ಇಂದು ವಿಶ್ವ ತಬ್ಬಲಿಯಾಯ್ತು
ಆರೆಡೆಗೆ ಸಾಗುವುದೊ ಅಳಲ ತೋಡಲಿಕೆ ?

ಜನಿಸಿದುದು ಬಡತನದಿ ಬೆಳೆದ ಬಲುಕಷ್ಟದಲಿ
ಬೇಡಲಿಲ್ಲವು ಅವನು ಭಾಗ್ಯಗಳನು !
ಇದ್ದುದಷ್ಟೇ ಸಾಕು ಇಷ್ಟಾರ್ಥ ಸಲ್ಲಿಸಲು
ಹೆಚ್ಚೇಕೆ ಬಯಸುವುದು ಎಂದು ಬೆಳೆದವನು !

ರೂಪ ಬಹಳೇನಿಲ್ಲ. ಕುರುಳುಕೂದಲು ಇಲ್ಲ !
ಚೆಲ್ಲಾಟ ನಗುವಾಟ ಬಹಳವಿಲ್ಲ !
ತೊಟ್ಟಿಲಲಿ ಮೌನದಲಿ ಕಣ್ಮುಚ್ಚಿ ಮಲಗಿರಲು
ಹೃದಯದಲಿ ಹುದುಗುತಲಿ ಬೆಳಗುತಿದ್ದಾತ್ಮ ೬೦

ಆಗಸದ ತಾರೆಯೊಲು ಪ್ರಭೆಯ ಬೀರುತಲಿತ್ತು.
ಬೇರಾವ ಹೊರರೂಪ ಕಾಂತಿ ಇಲ್ಲ !
ಉಳಿದ ಕೂಸುಗಳಂತೆ ಒರಲಾಟ ಚೀರಾಟ
ತೋರುತಿರಲಿಲ್ಲವನು. ಹಿರಿಯ ವೇದಾಂತಿ !

'ಮಂಕುಮಡ್ಡಿಯು ಅವನು' ಎಂದೆಲ್ಲ ಅನ್ನುವರು
ಆದರದ ನುಡಿಯವನಿಗರಿವೆ ಇಲ್ಲ
ದೂಡಿದ್ದರಾತನನು ಮಡೆಯನೆಂದೊಂದೆಡೆಗೆ
ಅದುವೆ ಆತನಿಗಾಯ್ತು ಸಗ್ಗದರಮನೆಯು !

ಜಗಕಾತ ಏಕಾಕಿ ! ಕಣಸಿನಲಿ ಬಲುಮಂದಿ
ಕೆಳೆಯರನು ವಿಶ್ವಗಳ ಕೂಡಿಸುತಲಿ  ೭೦
ಕುಣಿಸುತಲಿ ಕುಣಿಯುತಲಿ ಕಲಿತು ಬಾಳಿನ ಗೀತ
ಹೃದಯದಲೆ ಹಾಡುವನು ಹಿಗ್ಗಿ ಹೊಸತಾಗಿ !

ಒಮ್ಮೊಮ್ಮೆ ಬೆಳಗಿನಲಿ ಮೋಡ ಮುಸುಕಿದ ಮಲೆಯ
ಮೇಲ್ಮುಸುಕ ನೋಡುತಲಿ ಮೈಮರೆಯುತ
ಮನಸಿನಲಿ ಬಲುಬಗೆಯ ಸೌಂದರ್ಯ ಸೃಷ್ಟಿಸುತ
ಹೊಸಜಗವ ಸೇರುವನು ಕುಣಿಯುವನು ಅಲ್ಲಿ !

ಪ್ರಕೃತಿ ಮಾತೆಯ ತೊಡೆಯ ಮೇಲೆ ಮಲಗಿದ ಕಂದ
ಎದೆಹಾಲನೀಂಟಿದನು ತೊರೆಗಳಿಂದ
ಉಣಿಸೆಲ್ಲ ಸೃಷ್ಟಿಸೊಗ ಉಡಿಗೆ ಸ್ವಷ್ಟಿಯು ನೇಯ್ದ
ಸೌಂದರ್ಯ ಶೃಂಗಾರ ಬಾನ್ಮುಗಿಲಿನುಡುಪು !  ೮೦

ಇಂತೆ ಬೆಳೆದವನವನು ಪ್ರಕೃತಿಮಾತೆಯ ಮಡಿಲ
ಮಣಿಯಾಗಿ, ಜಗಕೆಲ್ಲ ಮೌನಿಯಾಗಿ.
ಅರಿಯಲಾರದೆ ಅವನ ಅರಿವಿನಾಳವ ಜಗವು
ವಿಷದಬೇವನು ಬಿತ್ತಿ ಬೆಳೆಯಿಸಿತು ದಿನವು.

ಬೆಳೆದಂತೆ ಬೆಳೆದಿತ್ತು ವಿಶ್ವಬಿತ್ತಿದ ಬೇವು
ನೋವು ಬಂದವನಾತ್ಮ ಮುತ್ತಿ ಕುಕ್ಕಿ
ಕಾವರಾರಿಲ್ಲೆಂದು ಕಾಡಿತವನಾತ್ಮವನು
ಕಾಡುಪಾಲಾಗಿಸುವೆ ಹೂವನಿದನೆಂದು.

ಆದರೂ ಹೃದಯದಲಿ ಬೆಳಗುತಿದ್ದಿತು ಬೆಳಕು.
ನೋವೆಲ್ಲ ಕಾವೆಂದು ಕಾವನೆಂದು ೯೦
ಬರಮಾಡಿ ಬರಸೆಳೆದು ಅಪ್ಪಿಕೊಂಡನು ಅದನು
ನೋವೆ ಆತನ ಜೀವಗೆಳತಿಯಂತಾಯ್ತು !

ಬೇರೇನು ಇರಲಿಲ್ಲ. ಭಂಗಾರವಿರಲಿಲ್ಲ.
ಬಡತನವೆ ಅವನೊಡವೆ-ಅದುವೆ ಎಲ್ಲ !
ಇರ್ದುದವನಿಗೆ ಒಂದೆ, ವಿಶ್ವವನೆ ಪ್ರೇಮಿಸುವ
ವಿಸ್ತಾರ ಹೃದಯದಲಿ ಕರುಣೆ ತುಂಬಿತ್ತು.

ವಿಶ್ವವನ್ನಾವರಿಸಿ ತುಳಿಯುತಿಹ ಕತ್ತಲೆಯ
ತೊಲಗಿಸುತ ಜಗಕೆಲ್ಲ ಬೆಳಕನಿತ್ತು
ಜೀವಜೀವಕೆ ಪ್ರೇಮಬಳ್ಳಿಯನು ಹಬ್ಬಿಸುತ
ಶಾಂತಿಯನು ಹರಹುವೆನು ಎಂಬ ಬಯಕೆಯಲಿ ೧೦೦

ಹೊರಹೊರಟ ತನ್ನೆಲ್ಲ ಸುಖವ ತ್ಯಜಿಸುತಲಾತ
ಬಲಿಕೊಟ್ಟ ತನ್ನಾತ್ಮ ಜಗದ ಸುಖಕೆ
ಮಾನವನ ಮೇಲ್ಮೆಗಾಗೆಲ್ಲವನು ವರ್ಜಿಸಿದ
ತನಗಾಗಿ ತಾನಿಲ್ಲ ಉಳಿದರಿಗೆ ಎನುತ!

ಕತ್ತಿಮಸೆದರು ಕೆಲರು. ಕುತ್ತಿಗೆಗೆ ನೇಣೆಸೆದು
ಕೊಚ್ಚಲಿಕೆ ಬಂದವರು ಮತ್ತೆ ಕೆಲರು!
ಎತ್ತೆತ್ತ ನೋಡಿದರು ಆರಿಗಾಗವನೆಲ್ಲ
ಬಲಿಯಿತ್ತನೋ ಅವರೆ ಬಂದು ಬಡಿಯುವರು!

ಪ್ರಗತಿಯೊಳಗಡಿಯಿಟ್ಟ ಮಾನವನ ಜೀವನವು,
ಬೆಂಕಿಯಲಿ ಮಿಾಯುತಲಿ ಹೊರಗೆ ಬಂದು
ಎಚ್ಚತ್ತ ಕಾಂತಿಯಲಿ ಕಿರಣವನು ಹೊರಚೆಲ್ಲಿ
ರವಿಯನೇ ನಾಚಿಸುತ ಜಗವ ಬೆಳಗಿಪುದು.

ಅಂತೆ ಅವನಿರವಾಯ್ತು. ಎದುರಾಳಿಗಳನೆಲ್ಲ
ಎದುರಿಸಿದ. ಎದೆತುಂಬ ವಿಶ್ವಪ್ರೇಮ!
ಬಲವನಿಮ್ಮಡಿಸಿತ್ತು, ಒಲವಿನಲಿ ಗೆದ್ದನವ
ಎಲ್ಲರನು ತಣಿಯಿಸಿದ ಪ್ರೇಮ ವರ್ಷದಲಿ!

ಎಡರುಗಳು ಎನ್ನಿತೆನಿತೊ ಅಲೆಮೇಲೆ ಅಲೆಯಂತೆ
ಮರುಳು ಮಾಡಲಿಕೆಂದು ಮುತ್ತುತಿರಲು
ಒತ್ತರಿಸಿ ಅವುಗಳನು ಕಾವ್ಯವನು ಮೇಲೆತ್ತಿ
ಕನ್ನಡಕೆ ಜೀವವನು ತುಂಬಿ ನಿಲ್ಲಿಸಿದ! ೧೨೦

ಮುಸುಕುತಿಹ ಮಂಜನ್ನು ಮರ್ದಿಸುತ ಮೇಲೇರಿ
ಜಗಕೆಲ್ಲ ಜವ್ವನವ ಹಂಚುತಿರುವ
ರವಿಯಂತೆ ಆವನಾಗಿ ಬಂದ ಮುಳ್ಳಂಟೆಗಳ
ಮುರಿದೆಸೆದು ಕ್ಷಣವೊಂದು ಕ್ಷಣದಿ ಮುಂಬಂದ !

ಅಂಥ ಎನ್ನೊಡಲಮಣಿ ಇಂದು ಇಲ್ಲದೆ ಹೋದ
ಬಂಜೆಯಾದೆನೆ ಅವನ ಹೆತ್ತ ನಾನು ?
ಅಂತಹರ ಮತ್ತೊಮ್ಮೆ ಹಡೆಯುವೆನೆ ಪಡೆಯುವೆನೆ ?
ನಿರ್ಭಾಗ್ಯೆ ! ಕೊರಗೆನ್ನ ಕರುಳಕೊರೆಯುತಿದೆ !

ಸಂಜೆಯಾಗಸದಲ್ಲಿ ರಂಜಿಸುತ ಚಣಕಾಲ
ಜಗಕೆಲ್ಲ ಸಿಂಗರದ ಊಟವಿಕ್ಕಿ ೧೩೦
ಕುಣಿಕುಣಿದು ಆನಂದದೆಲರ ಹೊರಕಳುಹುತಲಿ
ವಿಶ್ವವೆಲ್ಲವ ಕಂಪಿನಲ್ಲಿ ಮುಳುಗಿಸಿದ

ಹೊಳೆವ ಮಲ್ಲಿಗೆ ನೋಡ ಮರುಚಣವೆ ಕತ್ತಲಲಿ
ಮುಗಿಲಿನಲಿ ಮಾಯವಾಗುವ ತೆರದಲಿ
ನಾಡನೆಲ್ಲವ ತನ್ನ ಪುಂಗಿಯಾ ಗುಂಗಿನಲಿ
ಮೈಮರೆಸಿ ಕುಣಿಸಿದವ ಮರೆಯಾದನಿಂದು !

ಸೋದರಿಯರೆನಿತಿಹರು, ಆದರದಲೆನ್ನೊಡಲ
ಬಾಧೆಯನು ತಗ್ಗಿಸಲು ಆಪರೇನು ?
ಕಲ್ಗುಡ್ಡಗಳು ಕೂಡ ಕೊರಗಿನಲಿ ಮರುಗುತಲಿ
ಮೌನದಲಿ ಮುದುಡಿಹುವು. ಮಾಳ್ಪದೇನಿನ್ನು? ೧೪೦

ನುಡಿಗಳಲಿ ಎನ್ನಳಲ ಪೇಳಲೆಂತೋ ಅರಿಯೆ
ಒಡಲ ಕಡಲಿನ ಮೊರೆತ ತಡೆಯಲಾರೆ.
ಉಕ್ಕುಕ್ಕಿ ಮೇಲೇರಿ ಬಿಕ್ಕುತಿದೆ ಕೊರಗಿನಲಿ
ಕೂಡುತಿದೆ ಮೇಲೆಸೆದ ಕೊರೆನೊರೆಯು ಪರಿಸೆ ! ”

ಕನ್ನಡದ ನಾಡಿಂತು ಕೊರಗಿ ಸೊರಗುತಲಿಹುದು
ಕಳೆದ ತನ್ನಯ ಎಳೆಯ ಕೂಸಿಗಾಗಿ
ಮೇಲ್ಮುಸುಕು ಬಿದ್ದಿಹುದು ಮುಖವ ಮರೆಮಾಡಿಹುದು.
ಕಣ್ಣೀರು ತೊಟ್ಟಿಕ್ಕಿ ಕಾವೇರಿಯಾಗೆ !

“ ಒಂದಿರುಳು ಒಂದುದಿನ ಜೀವನದ ಮಿತಿಯಾಯ್ತು
ಪ್ರೇಮದಲೆ ಅದನೆಲ್ಲ ಕಳೆದೆವಾವು ೧೫೦
ಮುಂದೆ ಪಯಣವ ಬೆಳೆಸಿ ಇಂದೆನ್ನ ಮರೆತಿರುವೆ
ಎದೆಯಿಂದು ಮಿದಿಮಿದಿದು ಕುದಿಯುತಿದೆ ರಕ್ತ !

ನೀನು ಆಡಿದ ಆಟ, ನೀನು ಮಾಡಿದ ಮಾಟ
ನೀನು ನಕ್ಕಾ ನಗೆಯು ಮರುಳುಗೊಳಿಸಿ
ಬಳಿಗೆ ಸೆಳೆಯಿತು ಎನ್ನ ! ನಿನ್ನ ಆಲಿಂಗನದಿ
ಭ್ರಾಂತಿಗೊಳಿಸಿತು ಎನ್ನ, ಮೈಮರೆತೆ ನಾನು !

ವಿಶ್ವಪ್ರೇಮದ ಹೂವ ಮುಡಿಸುತೆನ್ನಯ ಜಡೆಗೆ,
ಕಂಗಳಿಗೆ ತಾರೆಗಳ ಬೆಳಕನಿತ್ತೆ.
ಸತ್ಯ ಸೌಂದರ್ಯಗಳ ಜರತಾರಿ ಉಡಿಗೆಗಳ
ನಿತ್ಯತೆಯ ಯೌವನದ ಬಾಸಿಂಗವಿತ್ತೆ. ೧೬೦

ವೀಣೆಯಿಂಚರವೆನ್ನ ನುಡಿಯು ಬಾಳುವೆಯಾಯ್ತು
ಮೋಡಗಳ ಹೊನ್ನಂಚೆ ವಾಹನವಿರೆ
ಮನಸೆಳೆವ ಮುಗುದೆಯರ ಮುಗುಳುನಗೆ ದೃಷ್ಟಿಯೆನೆ
ಉಪವನದ ಹೊಸ ಕಂಪೆ ಎನ್ನ ಉಸಿರಾಯ್ತು.

ಮೋಡದಲಿ, ಮಿಂಚಿನಲಿ, ಕಾಡಿನಲಿ, ನಾಡಿನಲಿ
ತೊರೆಗಳಲಿ, ಕೆರೆಗಳಲಿ, ತೆಂಗು ಕಂಗು
ತರುಗಳಲಿ, ಬಳ್ಳಿಯಲಿ, ಮೃಗಗಳಲಿ ಖಗಗಳಲಿ
ಪ್ರೇಮವನು ಕಂಡೆನ್ನ ಮಡಿಲ ತುಂಬಿಸಿದೆ.

ಎಳಹರೆಯದಲಿ ಹೂವು ಮೊಗೆಮೊಗೆದು ಹೊರಚೆಲ್ಲಿ
ಹಾಯಾಗಿ ಕಂಪನ್ನು ಹರಡುವಂತೆ ೧೭೦
ನಿನ್ನಾತ್ಮ ಪ್ರೇಮವನು ಮೊಗೆಮೊಗೆದು ಹರಹಿತ್ತು
ಜಗಕೆಲ್ಲ ಸಂದೇಶ ಪ್ರೇಮತಂದಿತ್ತು.

ಅಂದು ಹಿಂದಿನ ಅರಿವು, ಮುಂದಕೇನಿಹುದೆಂಬ
ಚಿಂತೆ ಬರಲಿಲ್ಲೆನಗೆ–ಅಂದೆ ಸುಖವು !
ಇಂದು ಪ್ರೇಮಾಶ್ರುಗಳ ಜ್ವಾಲೆ ತಗ್ಗಿಪರಿಲ್ಲ
ಹರಿಯುತಿದೆ ಎನ್ನೊಲವು ಕೇಳ್ವವರೆ ಇಲ್ಲ !

ಎನಗೆಲ್ಲ ತುಂಬಿಸಿದೆ. ಪುಷ್ಪಗಳ ರಸವನ್ನು
ಹೀರಿ ಹೆರರಿಗೆ ಹೊತ್ತು, ಜೀವ ತೆತ್ತು
ಜೇನು ಮರೆಯಾಗುವೊಲು ಮರೆಯಾದೆ ಜಗದಿಂದ
ಮತ್ತಾರು ಉಳಿದಿಹರು ನಿನ್ನ ಸರಿಸಮರು ?” ೧೮೦

ಇಂತು ಎದೆಯೊಡೆವಂತೆ ಕಾವ್ಯಕನ್ನಿಕೆ ಕುಳಿತು
ಕಳೆದ ನಲ್ಲನಿಗಾಗಿ ಅಳುತಲಿಹಳು.
ಗಿಡಗಳಲಿ ನಡುನಡುವೆ ಸುಳಿಯುತಿಹ ಮೆಲ್ಲೆಲರು
ನಾರ್ದನಿಯ ಕೊಡುತಲಿದೆ-ಸುಂಯ್ಗುಡುತಲಿಹುದು!

"ಸುಖದುಃಖ ಬೆಂಬತ್ತಿ ಬೆಳಕು ಕತ್ತಲೆಯಂತೆ
ಬಾಳನೆಲ್ಲವ ಮುಸುಕಿ ಹಿಸುಕುತಿಹುವು.
ಸುಖ ಮೂಡುವುದರಲ್ಲಿ ದುಃಖ ದೂಡುವುದದನು
ಜೀವ ಬರಿ ಸೆಣಸಾಟ ಸುಖದುಃಖಗಳಿಗೆ!

ನಾಲ್ಕು ದಿನಗಳ ಜೀವ. ಒಂದುಚಣ ಸುಖನಾದ
ಮರುಚಣವೆ ತಂತಿಯದು ಚೂರುಚೂರು! ೧೯೦
ಕರ್ಕಶದ ದನಿಹೊರಟು ಕಿವಿಗಳನು ಕಿವಿಚುವುದು
ತಾಳುವುದೆ ಬಾಳುವುದು ಎಂದರಿತನವನು!

ಎಮ್ಮೊಳಗೆ ಬಲುಜ್ಞಾನಿ, ಮೌನದಲಿ ಮಾತಿನಲಿ
ಮಾಧುರ್ಯಮುತ್ತುಗಳ ಬಿತ್ತಿಬಿತ್ತಿ
ಎದೆಯೊಳಗೆ ಆನಂದಸುಗ್ಗಿಯಾಗಿಸುತಿರ್ದ
ಉಳುವರಿಲ್ಲದೆ ಇಂದು ನೆಲವು ಬರಡಾಯ್ತು!"

ಕಾವ್ಯಸೋದರರಿಂತು ಕೊರಗುತಿಹರವಗಾಗಿ
"ಹೋದನೇ ಹಕ್ಕಿಯೊಲು ಹಾಡಿದಾತ!
ವಿಶ್ವಕೆಲ್ಲವ ಪ್ರೇಮ ಕಲಿಸಿದವನೇ ವಿಷವು
ಜ್ವಾಲೆಯಲಿ ಬಿದ್ದಿಂದು ಬೂದಿಯಾಗಿಹನೆ?" ೨೦೦

ಜೀವದಿಂದಿರ್ದವನ ' ಹುಚ್ಚ ! ಹುರುಳಿಲ್ಲದವ ! '
ಎಂದೆಲ್ಲ ಹಳಿದಿರ್ದರವನ ಜನರು
ಹಾಡಲೆತ್ತಿದ ಕೊರಳ ನುಡಿಯುನೇಣಲಿ ಬಿಗಿದು
ಕೊಲೆಮಾಡೆ ಯತ್ನಿಸಿದವರವನ ಜತೆಯುವರು !

ಉಸಿರು ಹೊರಡಲು ಎಡೆಯನಿನಿತಾದರೂ ಬಿಡದೆ
ಬಯಕೆಯನು ಬಸಿರಿನಲೆ ಬಡಿದು ಕೊಂದು
ಸಾವ ದವಡೆಗೆನೂಕಿ " ಕೃತಕಾರ್ಯ " ರಾಗುತಲಿ
ತಲೆದೂಗಿ ಹಿಗ್ಗಿದರು ಒಡಲ ಕಿಚ್ಚಿನಲಿ !

ಇಂದವನ ನುಡಿಯುಡಗಿ ಉಸಿರು ನಿದ್ರಿಸುತಿರಲು
ಹೂಮಾಲೆ ತರುತಿಹರು. ಶವದ ಬಳಿಗೆ ೨೧೦
ಹಾವಹೆಡೆ ತೋರುತಲಿ ಸಾವಿನಲಿ ದೂಡಿದರು
ಹೀನತೆಯ ದಾನವರು ! ಮಾನವರೆ ಅವರು ?

ಅವನು ಹಾಡಿದ ಹಾಡು ಅರಿಯದೆಯೆ ಕುಹಕದಲಿ
ಕೂಗನೆಬ್ಬಿಸಿ ಕಿರಿಚಿ ಕರುಳ ಕೊಯ್ದು
—ನಿಲ್ಲಲಿಕು ನೆರಳಿಲ್ಲ !–ಇರವಿಗೇ ಬರಬಂತು !—
ಸಾವನಪ್ಪುವವರೆಗು ಬಿಡಲೆ ಇಲ್ಲವರು !

ಇಂದವನ ಒಲುಮೆಯಲಿ ಬಲುಮೆ ಕಾಣುತಲಿಹರು
ಅಂದು ಮುಚ್ಚಿದ ಮಂಜು ಮಾಯವಾಗಿ
ನಂಜುಹೃದಯವು ಇಂದು ನಲ್ಮೆನವಿಲಾಗಿಹುದು
ಕಣ್ಣೀರು ಕರೆಯುತಲಿ ಬರುತಲಿಹರವರು ! ೨೨೦

ಸುಖದುಃಖ ಬಿಸಿಲುಮಳೆ ಕೈಗೆ ಕೈ ಕೂಡಿಸುತ
ವಿಶ್ವವನು ಮುಚ್ಚಿರಲು ಆತಮಾತ್ರ
ಬಾಳಬಾನಲಿ ಮೂಡಿ ಹೊಳೆಯುತಿಹ ಕಾಮಧನು
ಕಂಡು ಆನಂದದಲಿ ಕುಣಿದು ನಲಿದಿರ್ದ

ಬಾಳಿನಿಂದೇನನೂ ಬಯಸಲಿಲ್ಲವು ಆತ
ಬಂದುದೆಲ್ಲವ ಬಳಿಗೆ ಕರೆದ ಮಾತ್ರ!
ಸುಖದಸಿರಿ ದುಃಖದರಿ ಎಲ್ಲ ಸಮವಾಗಿತ್ತು
ಪ್ರೇಮವನು ಬೆಳಗಿಸುವ ಸಾಲುದೀಪಗಳು!

* * *

ಸತ್ತನೆಂದೆನಬೇಡಿ. ಸತ್ತಿಲ್ಲ. ಬದುಕಿರುವ.
ಸತ್ತನೆನ್ನುವ ಸೊಲ್ಲು ಬೇಡ! ಬೇಡ! ೨೩೦
ಸಾವಿನಲು ಜೀವವಿದೆ! ಜೀವದೊಳಗಿಲ್ಲದುದು
ಸಾವಿನಲಿ ಜೀವಿಸಿದೆ! ಕಣ್ಣೀರ ನಿಲಿಸಿ!

ಹೂವು ಬಾಡಿದರದರ ಕಂಪು ಬಾಡುವುದೇನು?
ಗೀತಮುಗಿದರೆ ಅದರ ಇಂಪು ಹೋಯ್ತೆ?
ಕತ್ತುರಿಯು ಇಲ್ಲದಿರೆ ಗಂಧ ಇಲ್ಲದೆಹೋಯ್ತೆ
ಹೊರದೇಹ ಸಾಗಿದೊಡೆ ಚಿರ ಆತ್ಮಕಳಿವೆ?

ಸತ್ತಿಲ್ಲ! ಸತ್ತಿಲ್ಲ! ಚಂದನವು ಉರಿಯುತಲಿ
ಬೆಂಕಿಹೊಗೆಕಾವುಗಳ ರೂಪವಾಂತು
ವಿಶ್ವಸೇವೆಯನೆಸಗಿ ಉಳಿಯುವೊಲು ಉಳಿದಿಹನು
ಸಾವವನ ಜೀವವನು ಒಯ್ಯಲೆಂತಹುದು? ೨೪೦

ಸಾವು ಜೀವದ ನಾಡಿ. ಜೀವ ಸಾವಿನ ಮೋಡಿ.
ಮೂಡಿಹುದು ಮೂಡಲಲಿ ರವಿಯು ಬೆಳಕು !
ಸಂಜೆಸಾವಲಿ ಮುಳುಗಿ ಸಾವಿನಿಂ ಹೊರಬಿದ್ದು
ಜೀವ ಹಂಚುತಲಿರುವ — ಉದಯುರವಿ ನೋಡಿ !

ಜೀವನದಮೇಲಿರುವ ಮಾಯೆ ಸಾವಿನದಿತ್ತು
ಹರಿಯಿತದು ಇಂದೀಗ ಮುಸುಕು ಸರಿದು
ಜೀವಕಾಂತಿಯು ಪೆರ್ಚಿ ಇಮ್ಮಡಿಸಿ ಮುಮ್ಮಡಿಸಿ
ವಿಶ್ವವನು ಬೆಳಗಿಸಿದೆ— ಸತ್ತಿಹನೆ ಅವನು ?

ಬಾಳುತಿಹ ಬಾಳಿನಲಿ ಮೋಡೆದಲಿ ನೀರಾಗಿ
ನೀರಿನಲಿ ಹನಿಯಾಗಿ, ಹನಿಯುಲಣುವು ! ೨೫೦
ನಾಳನಾಳದಲವನ ಬಾಳಗೀತವು ಮಿಡಿದು
ಹಾಡಿನಲಿ ಇಂಪಾಗಿ ಜೀವಿಸಿಹನವನು !

ಹೂವಿನಲಿ ಮಧುವಾಗಿ, ಹಕ್ಕಿಯಲಿ ಹಾಡಾಗಿ
ಮುಗುದೆಯರ ಮನಸಿನಲಿ ಮುಗುಳು ಆಗಿ,
ಮಗುವಿನೆಳನಗುವಾಗಿ, ಬೆಳಕಕಿರಣಗಳಾಗಿ
ಪವನನಲಿ ತಂಪಾಗಿ ಉಳಿದಿರುವನವನು.

ಮೊಗ್ಗಾಗಿ ಉರುಳಿದುದು ತಾರೆಯಾಗರಳಿಹುದು
ಜಗಕೆ ಬೀರುತಲಿಹುದು ವಿಶ್ವಪ್ರೇಮ.
ಹಾಯಾಗಿ ಹರಡಿರಲು ಹಾಲ್ಚೆಲ್ಲಿದಾನಂದ
ತಾರೆ ಕುಣಿಯುತಲಿಹುದು—ಹೃದಯಾಂತರಾಳ! ೨೬೦

ಕವಿಯಾತ ಮಡಿದನೆಂದೆಲ್ಲ ಮರುಗುವುದೇಕೆ?
ಮನಸಿನಲಿ ಮೂಡಿರಲು ಅವನ ನೆನಪು
ಎಂದು ಬಾಡದ ಹೂವು ಆತ ನುಡಿಸಿದ ಗೀತ!
ಕವಿಗೆ ಮರಣದ ಸೋಂಕೆ? ಚಿರಜೀವಿಯಾತ! ೨೬೪



---

೧೯೪೪ರಲ್ಲಿ ವಿಶ್ವವಿದ್ಯಾನಿಲಯದಿಂದ ಬಿ.ಎಂ.ಶ್ರೀಯವರ ರಜತೋತ್ಸವ ಸ್ವರ್ಣಪದಕ ಪಡೆದುದು.

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು